ಪ್ರಚಾರ ಪುಸ್ತಕ ಮಾಲೆ

261

# ಹೆಳವನಕಟ್ಟೆ ಗಿರಿಯಮ್ಮ

ನಗುವನಹಳ್ಳಿ ಪಿ. ರತ್ನ



# ಕೆಲವು ಸಾಹಿತ್ಯ ಕೃತಿಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ— ಕೆ. ವೆಂಕಟರಾಮಪ್ಪ
೪. ಪಂಪ— ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯಿ
೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ
೨೯. ಅಲ್ಲಮಪ್ರಭು—ಡಾ. ಟಿ ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ

ಪ್ರಚಾರ ಪುಸ್ತಕಮಾಲೆ-೨೬೧

# ಹೆಳವನಕಟ್ಟೆ ಗಿರಿಯಮ್ಮ

**ನಗುವನಹಳ್ಳಿ ಪಿ. ರತ್ನ**




೧೯೯೩

ಮೊದಲನೆಯ ಮುದ್ರಣ ೧೯೯೩

೧೦,೦೦೦ ಪ್ರತಿಗಳು



**ಬೆಲೆ : ರೂ. ೧-೦೦**

ಪ್ರಕಾಶಕರು :

ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೫೭೦೦೦೬

ಮುದ್ರಕರು :

ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯ, ಮೈಸೂರು-೫೭೦೦೦೬

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೋಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿಯ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕ ವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾರೆ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯದ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ; ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ಅವರ ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆ ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಗೆಗಳನ್ನು ಕೊಂಡು, ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜ ವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ

ಮುಂತಾದ ವಿಷಯಗಳನ್ನು ಕುರಿತ ಇನ್ನೂರ ಅರವತ್ತು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಶ್ರೀಮಂತಿ ನಗುವನಹಳ್ಳಿ ಪಿ. ರತ್ನ ರವರ 'ಹೆಳವನಕಟ್ಟೆ ಗಿರಿಯಮ್ಮ' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

**ಎಂ. ಮಾದಯ್ಯ**
ಕುಲಪತಿಗಳು

# ಅರಿಕೆ

ಕನ್ನಡ ಸಾಹಿತ್ಯದಲ್ಲಿ ಭಕ್ತಿಪರವಾದ ಕೃತಿಗಳಲ್ಲಿ ರಚಿಸಿದ ಕವಯಿತ್ರಿ ಹೆಳವನಕಟ್ಟೆ ಗಿರಿಯಮ್ಮ, ಪಾಂಡವಪುರ ತಾಲೂಕು ಕುಂತಿ ಬೆಟ್ಟ ಪ್ರೌಢಶಾಲೆಯಲ್ಲಿ ನಾನು ಮಾಡಿದ ಪ್ರಚಾರೋಪನ್ಯಾಸದ ಲಿಖಿತ ರೂಪ ಈ ಕಿರುಹೊತ್ತಿಗೆ.

ಈ ಪುಸ್ತಕ ಬರೆಯಲು ಆಸ್ಪದ ಮಾಡಿಕೊಟ್ಟವರು, ಪ್ರೇರಣೆಯನ್ನಿತ್ತವರು ಪ್ರಸಾರಾಂಗದ ನಿರ್ದೇಶಕರಾಗಿರುವ ಮಾನ್ಯ ಶ್ರೀ ಕೆ. ಟಿ. ವೀರಪ್ಪನವರು. ನಾನು ಪುಸ್ತಕವನ್ನು ಬರೆಯಲು ಪ್ರೋತ್ಸಾಹವಿತ್ತು ಹಾರೈಸಿದವರು ಡಾ. ಸಿ. ಪಿ. ಕೆ. ಅವರಿಬ್ಬರಿಗೂ ನನ್ನ ಅನಂತ ಕೃತಜ್ಞತೆಗಳು. ನನ್ನ ಸಹೋದ್ಯೋಗಿಗಳಾದ ಕನ್ನಡ ಅಧ್ಯಯನ ಸಂಸ್ಥೆಯ ಉಪನಿರ್ದೇಶಕರಾದ ಶ್ರೀ ಮೈಲಹಳ್ಳಿ ರೇವಣ್ಣ. ಸಹಾಯಕ ನಿರ್ದೇಶಕರಾದ ಡಾ. ಎಂ. ಪಿ. ಮಂಜಪ್ಪಶೆಟ್ಟಿ ಎಸ್. ರಾಮಪ್ರಸಾದ್ ಮತ್ತು ಎಸ್. ಚನ್ನಪ್ಪ ಅವರ ಸಹಾಯವನ್ನೂ ಇಲ್ಲಿ ನೆನೆಯುತ್ತೇನೆ. ಮಹಾರಾಜ ಕಾಲೇಜಿನಲ್ಲಿ ರಾಜ್ಯಶಾಸ್ತ್ರದ ರೀಡರ್ ಆಗಿ ಕಾರ್ಯನಿರ್ವಹಿಸುತ್ತಿರುವ ನನ್ನ ಪತಿ ಎಂ. ವಿ. ನಾಗರಾಜ್ ಅವರ ಸಹಕಾರವನ್ನೂ ಸ್ಮರಿಸುತ್ತೇನೆ. ಅಂದವಾಗಿ ಮುದ್ರಿಸಿದ ಮೈಸೂರು ವಿಶ್ವವಿದ್ಯಾನಿಲಯ ಮುದ್ರಣಾಲಯದ ಕಾರ್ಯನಿರತ ನಿರ್ದೇಶಕರು ಶ್ರೀ ಬಿ. ಎಸ್. ಸಿದ್ದೇಗೌಡರು ಹಾಗೂ ಸಿಬ್ಬಂದಿ ವರ್ಗದವರು, ಇವರೆಲ್ಲರಿಗೂ ನನ್ನ ಅನಂತ ಧನ್ಯವಾದಗಳು.

**ನಗುವನಹಳ್ಳಿ ಪಿ. ರತ್ನ**

# ವಿಷಯಾನುಕ್ರಮಣಿಕೆ


೧. ಪೀಠಿಕೆ .... ೧

೨. ಗಿರಿಯಮ್ಮನ ಕಾಲ ... ೧

೩. ಗಿರಿಯಮ್ಮನ ಜೀವನ ವೃತ್ತಾಂತ .... ೨

೪. ಕೃತಿಗಳು .... ೧೬

೫. ಕಾವ್ಯ ಸಮೀಕ್ಷೆ ... ೨೯

## ೧. ಪೀಠಿಕೆ

ಕನ್ನಡದಲ್ಲಿ ಭಾಗವತೋಕ್ತವಾದ ಭಕ್ತಿ ಸಾಹಿತ್ಯ ಪ್ರಾರಂಭವಾದುದು ಹರಿದಾಸರಿಂದ. ದಾಸಸಾಹಿತ್ಯ ಭಗವಂತನ ಬಗೆಗೆ ನಿಷ್ಕಾಮವಾದ ಭಕ್ತಿಯನ್ನು ಜನರಲ್ಲಿ ಪ್ರಸಾರ ಮಾಡಲು ಸಾಕಷ್ಟು ಶ್ರಮಿಸಿತು. ನರಹರಿತೀರ್ಥರಿಂದ ಮೊದಲುಗೊಂಡು ಪ್ರಾರಂಭವಾದ ಈ ಸಾಹಿತ್ಯ ಒಂದು ಪರಂಪರೆಯಾಗಿ, ವ್ಯವಸ್ಥಿತವಾಗಿ ಕರ್ನಾಟಕದಲ್ಲಿ ಬೆಳೆದುಬಂದು ಸಮರ್ಥ ಸಂಪ್ರದಾಯವನ್ನೇ ನಿರ್ಮಿಸಿತು. ಗೋಪಾಲದಾಸರೇ ದಾಸಸಾಹಿತ್ಯದ ಕೊನೆಯ ಪ್ರಮುಖ ದಾಸರು. ಗೋಪಾಲದಾಸರ ನಂತರ ಅವರಿಂದ ಅನುಗೃಹಿತಳಾದವಳು ದಾಸಸಾಹಿತ್ಯ ಪಂಕ್ತಿಯಲ್ಲಿ ಮುಂದುವರಿದವಳು ಆದ ಹೆಳವನಕಟ್ಟೆ ಗಿರಿಯಮ್ಮ ಕನ್ನಡದ ಮುಖ್ಯ ಕವಯಿತ್ರಿಯರಲ್ಲಿ ಒಬ್ಬಳು.

ವೈಷ್ಣವಭಕ್ತಿ ಪಂಥ ಪ್ರಾರಂಭವಾಗಿ ಕೆಲವು ಶತಮಾನಗಳು ಕಳೆದಿದ್ದರೂ ಭಕ್ತಿ ಪಂಥದಿಂದ ಪ್ರಭಾವಿತರಾದ ಕವಯಿತ್ರಿಯರು ಹದಿನೆಂಟನೆಯ ಶತಮಾನದ ಪ್ರಾರಂಭಕ್ಕೆ ಮೊದಲು ಕಂಡು ಬರುತ್ತಿರಲಿಲ್ಲ. ಗಲಗಲಿಯ ಅವ್ವನವರು, ಹೆಳವನಕಟ್ಟೆ ಗಿರಿಯಮ್ಮ, ಹರಪ್ಪನಹಳ್ಳಿ ಭೀಮವ್ವ, ಚ. ರಾ. ಚೆಲ್ಲವ್ವ, ಸಣ್ಣಭಡತಿ, ಗಣಪಕ್ಕ ಮುಂತಾದವರೆಲ್ಲಾ ಹದಿನೆಂಟನೆ ಶತಮಾನದವರಾಗಿದ್ದರು.

## ೧. ಗಿರಿಯಮ್ಮನ ಕಾಲ

ಸುಮಾರು ಹದಿನೆಂಟನೆ ಶತಮಾನದ ಪೂರ್ವಾರ್ಧದಲ್ಲಿದ್ದ ಕವಯಿತ್ರಿ ಹೆಳವನಕಟ್ಟೆ ಗಿರಿಯಮ್ಮನ ಹುಟ್ಟೂರು ಧಾರವಾಡ ಜಿಲ್ಲೆಯ ರಾಣಿಬೆನ್ನೂರು. ತಂದೆ ಭೀಷ್ಟಪ್ಪ ಜೋಯಿಸರು.

ತಾಯಿಯ ಹೆಸರು ತಿಳಿದುಬಂದಿಲ್ಲ. ಈಕೆಯ ಕಾಲವನ್ನು ನಿಖರವಾಗಿ ತಿಳಿಯಲಾಗುವುದಿಲ್ಲ. ಈಕೆಯ ಕೃತಿಗಳಲ್ಲಿ ದೊರೆಯುವ ಆಂತರಿಕ ಆಧಾರದಿಂದಲೇ ಕಾಲ ನಿರ್ಧರಿಸ ಬೇಕಾಗಿದೆ. ಕವಿಚರಿತೆಕಾರರ ಪ್ರಕಾರ ಈಕೆಯ ಕಾಲ ಕ್ರಿ.ಶ. ೧೭೫೦. ಗಿರಿಯಮ್ಮ ತನ್ನದೊಂದು ಕೀರ್ತನೆಯಲ್ಲಿ ಮಂತ್ರಾಲಯ ಮಠದ ಸ್ವಾಮಿಗಳಲ್ಲಿ ಒಬ್ಬರಾದ ಸುಮತೀಂದ್ರ ಸ್ವಾಮಿಗಳನ್ನು ಹೊಗಳಿ ಅವರನ್ನು 'ಸದಾನಂದ ಸುಮತೀಂದ್ರ ಹೃದಯ ಪಂಕಜ ಭೃಂಗ' ಎಂದು ಸ್ಮರಿಸಿರುವುದರಿಂದ ಅವಳು ಅವರ ಕಾಲದಲ್ಲಿ ಇದ್ದಿರಬೇಕು. ಸ್ವಾಮಿಗಳ ಕಾಲ ಕ್ರಿ.ಶ. ೧೬೯೧–೧೭೨೫. ಹಾಗಾಗಿ ಗಿರಿಯಮ್ಮನ ಕಾಲ ಕ್ರಿ.ಶ. ೧೭೨೫ ಎಂದು ಹೇಳಬಹುದು.

ಗಿರಿಯಮ್ಮ ತನ್ನ ಚಂದ್ರಹಾಸ ಕಥೆಯ ಹಾಡಿನಲ್ಲಿ, ಲಕ್ಷ್ಮೀಶ ಕವಿಯ ಜೈಮಿನಿ ಭಾರತದಲ್ಲಿರುವ ಚಂದ್ರಹಾಸೋಪಾಖ್ಯಾನವನ್ನು ನೋಡಿ ಬರೆದುದಾಗಿ ಗಿರಿಯಮ್ಮ ಹೇಳಿದ್ದಾಳೆ. ಕವಿಚರಿತೆಕಾರರ ಪ್ರಕಾರ ಲಕ್ಷ್ಮೀಶನ ಕಾಲ ಕ್ರಿ.ಶ. ಸು. ೧೭೦೦. ಗಿರಿಯಮ್ಮ ಇನ್ನೂ ಮುಂದೆ ಇದ್ದಿರಬಹುದು ಎಂಬುದರಲ್ಲಿ ಸಂದೇಹವಿಲ್ಲ. ಈ ಎಲ್ಲಾ ಸಾಹಿತ್ಯಿಕ ಆಧಾರಗಳಿಂದ ಸುಮಾರು ಹದಿನೆಂಟನೆಯ ಶತಮಾನದ ಪೂರ್ವಾರ್ಧದಲ್ಲಿ ಇದ್ದಳು ಎಂದು ತಿಳಿಯಬಹು ದಾಗಿದೆ.

## ೨. ಗಿರಿಯಮ್ಮನ ಜೀವನ ವೃತ್ತಾಂತ

ದಾಸ ಪರಂಪರೆಯಲ್ಲಿ ಗೋಪಾಲದಾಸರ ಸಮಕಾಲೀನಳಾಗಿ ಕಾಣಿಸಿಕೊಂಡ ಕವಯಿತ್ರಿಯರಲ್ಲಿ ಗಿರಿಯಮ್ಮ ಪ್ರಪ್ರಥಮಳು. ಅವಳು ಬಾಲ್ಯದಲ್ಲಿಯೇ ತಂದೆ ತಾಯಿಯನ್ನು ಕಳೆದುಕೊಂಡಿದ್ದ ಳೆಂದು ಅವಳ ಹಾಡುಗಳಿಂದ ಗಮನಿಸಬಹುದಾಗಿದೆ.

"ತಂದೆ ತಾಯೆಂಬುದನು ನಾನೊಂದು ಗುರುತವನರಿಯೆ ನಿಮ್ಮ
ಕಂದಳೆನಿಸಿ ಕಡೆಹಾಯಿಸೊ ಹೆಳವನಕಟ್ಟೆ ರಂಗ"

ಎಂದು ಉಗಾಭೋಗವೊಂದರಲ್ಲಿ ಗಿರಿಯಮ್ಮನೇ ಹೇಳಿಕೊಂಡಿರುವುದರಿಂದ ಆಕೆ ಹೆತ್ತವರನ್ನು ಚಿಕ್ಕಂದಿನಲ್ಲಿ ಕಳೆದುಕೊಂಡು ಚಿಕ್ಕಪ್ಪನ ಆಶ್ರಯದಲ್ಲಿ ಬೆಳೆಯುವಳು. ಆಕೆ ಶಾಲೆಗೆ ಹೋಗಿ ವಿದ್ಯೆ ಕಲಿತವಳಲ್ಲ. ವಿದ್ಯೆ ಕಲಿಯುವ ಸೌಲಭ್ಯವೂ ಇರಲಿಲ್ಲ, ತಂದೆ ಭೀಷ್ಮಪ್ಪ ಜೋಯಿಸರಿಂದ ಅಕ್ಷರಾಭ್ಯಾಸ ಕಲಿತವಳು.

ಗಿರಿಯಮ್ಮನಿಗೆ ಚಿಕ್ಕಂದಿನಿಂದಲೂ ಭಗವದ್ಭಕ್ತಿ. ಆಕೆಯ ಮನಸ್ಸೆಲ್ಲಾ ಭಗವಂತನಲ್ಲಿಯೇ ಕೇಂದ್ರೀಕೃತವಾಗಿತ್ತು. ಗಿರಿಯಮ್ಮ ಚಿಕ್ಕವಳಿರುವಾಗಲೇ ಹರಿಹರ ತಾಲ್ಲೋಕಿನ ಮಲೆಬೆನ್ನೂರು ಗ್ರಾಮದ ಶ್ಯಾನುಭೋಗ ಕೃಷ್ಣಪ್ಪನ ಮಗ ತಿಪ್ಪರಸನೊಂದಿಗೆ ವಿವಾಹವಾಗಿತ್ತು. ಆಕೆಯ ವೈವಾಹಿಕ ಜೀವನ ಹೊಂದಿಕೊಂಡು ನಡೆಯಲಿಲ್ಲ. ಬಲವಂತಕ್ಕೆ ವಿವಾಹವಾಗಿದ್ದಳೇ ಹೊರತು, ಸಾಂಸಾರಿಕ ಸುಖಕ್ಕಲ್ಲ. ಗಿರಿಯಮ್ಮನಿಗೆ ನಿಷೇಕಕಾಲ ಪ್ರಾಪ್ತವಾಗಲು, ಪುರೋಹಿತರು ಪದ್ಧತಿಗಳಂತೆ ಅವಳನ್ನು ಹಸೆಮಣೆಯ ಮೇಲೆ ಕೂರಿಸಿ ಹವನ (ಯಜ್ಞ) ಹೋಮಗಳನ್ನು ಮಾಡಿಸಿದರು. ಮುತ್ತೈದೆಯರಿಗೆಲ್ಲಾ ಅರಿಶಿಣ ಕುಂಕುಮ ವಿತರಣೆ ಮಾಡಿದರು. ಆ ದಿನ ಗಿರಿಯಮ್ಮ ಯಾರೊಡನೆಯೂ ಮಾತನಾಡಿರಲಿಲ್ಲ. ಕಡೆಗೆ ಧೈರ್ಯ ಮಾಡಿಕೊಂಡು ಅತ್ತೆಯೊಡನೆ ಈ ರೀತಿ ಹೇಳಿದಳು, "ನಾನು ನಿಮಗೆ ಸೊಸೆಯಾಗಿ ಬಂದುದು ನಿಜ, ಆದರೆ ಸಂಸಾರಕ್ಕಾಗಿ ಅಲ್ಲ. ನಿಮ್ಮ ಮಗನಿಗೆ ಬೇರೆ ಮದುವೆ ಮಾಡಿಸಬೇಕು. ಆ ಹೆಂಡತಿಯೊಡನೆ ಅವರು ಸುಖದಿಂದಿರಬೇಕು. ನಾನಿದ್ದಂತೆ ನಾನಿರಬೇಕು." ಆಗ ಗಿರಿಯಮ್ಮನ ಅತ್ತೆ-ಮಾವ ಎಲ್ಲರೂ ದಿಗ್ಭ್ರಮೆಗೊಳ್ಳುವರು. ತಿಪ್ಪರಸ ಗಿರಿಯಮ್ಮನ

ಮಾತನ್ನು ಒಪ್ಪಿಕೊಳ್ಳುವನು. ಗಿರಿಯಮ್ಮ ತನ್ನೆಲ್ಲಾ ಒಡವೆ ಗಳನ್ನು ಬಿಚ್ಚಿಕೊಟ್ಟು ಶುದ್ಧ ವೈರಾಗ್ಯ ಜೀವನ ನಡೆಸುವಳು.

ಗಿರಿಯಮ್ಮ ಪತಿಯು ಗೃಹದಲ್ಲಿದ್ದಾಗ ಸಾಂಸಾರಿಕ ಮೋಹಗಳ ಸೆಳವಿಗೆ ಸಿಲುಕದೆ ಕೊನೆತನಕ ವಿರಾಗಿಣಿಯಾಗಿಯೇ ಉಳಿದಳು. ವಿವಾಹದ ನಂತರ ತಿಪ್ಪರಸ ಮಲಗುವ ಕೋಣೆಗೆ ಹೋದಾಗ ಗಿರಿಯಮ್ಮನನ್ನು ಘಟಸರ್ಪವೊಂದು ಸುತ್ತಿಕೊಂಡಿರುವಂತೆ ಕಂಡು ಆಕೆ ದೈವಾಂಶಸಂಭೂತಳೆಂದು ಭಾವಿಸಿದ. ಗಿರಿಯಮ್ಮ ತನ್ನ ಪತಿಗೆ ಮರು ಮದುವೆಯನ್ನು ಮಾಡಿಸಿದ್ದಳು.

ಮಲೆಬೆನ್ನೂರಿನ ಸಮೀಪದಲ್ಲಿ ಕುಮಾರನಹಳ್ಳಿ ಎಂಬು ದೊಂದು ಚಿಕ್ಕ ಗ್ರಾಮವಿದೆ ಅದರ ಪಕ್ಕದಲ್ಲಿ ದಿಣ್ಣೆ ಇತ್ತು. ಅದರ ಸಮೀಪದಲ್ಲೇ ಒಬ್ಬ ಹೆಳವ ವಾಸವಾಗಿದ್ದ. ಹೆಳವನ ಹತ್ತಿರಕ್ಕೆ ಹಲವಾರು ದನಕಾಯುವ ಹುಡುಗರು ಬರುತ್ತಿದ್ದರು. ಹೆಳವ ಆ ಹುಡುಗರಿಗೆಲ್ಲಾ ಪ್ರತಿ ದಿವಸ ಒಂದು ದೇವರ ಕಥೆಯನ್ನು ಹೇಳುತ್ತಿದ್ದ. ಮಕ್ಕಳಿಗೂ ಕಥೆ ಕೇಳುವುದಕ್ಕೆ ಎಲ್ಲಿಲ್ಲದ ಉತ್ಸಾಹ ಕಥೆಯನ್ನು ಕೇಳಿ ಅವರು ಒಳ್ಳೆಯ ಮಕ್ಕಳಾಗಿದ್ದರು. ಹೆಳವ ಮತ್ತು ಮಕ್ಕಳೆಲ್ಲರೂ ಸೇರಿ ಒಂದು ಆಲೋಚನೆ ಮಾಡಿ ಒಂದು ಕಟ್ಟೆಯನ್ನು ಕಟ್ಟಿದರು. ಆ ಕಟ್ಟೆಗೆ "ಹೆಳವನ ಕಟ್ಟೆ" ಎಂಬ ಹೆಸರು ಬಂದಿತು.

ಕೆರೆಯ ಸಮೀಪದಲ್ಲಿ ಒಂದು ಹುತ್ತವಿತ್ತು. ಹಸುಗಳು ಆಗಾಗ ಹುತ್ತಕ್ಕೆ ಹಾಲು ಕರೆಯುತ್ತಿದ್ದವು. ಅದನ್ನು ಕಂಡು ಹೆಳವನಿಗೆ ಆಶ್ಚರ್ಯವಾಯಿತು. ಸ್ನೇಹಿತರೊಡನೆ ಹುತ್ತವನ್ನು ಬಡಿದು ಹಾಕಿದನು. ಅದರಲ್ಲಿ ರಂಗನಾಥನ ಮೂರ್ತಿ ದೊರಕಿತು. ಕೆರೆಯ ಪಕ್ಕದಲ್ಲಿಯೇ ದೇವಸ್ಥಾನವನ್ನು ನಿರ್ಮಿಸಿದನು. ಅಂದಿನಿಂದ ಆ ದೇವಸ್ಥಾನಕ್ಕೆ "ಹೆಳವನಕಟ್ಟೆ ರಂಗನಾಥ

ದೇವಾಲಯ" ಎಂದು ಹೆಸರಾಯಿತು. ಹೆಳವನಕಟ್ಟೆ ಗಿರಿಯಮ್ಮ "ಹೆಳವನಕಟ್ಟೆ ರಂಗನಾಥ"ನೆಂಬ ಅಂಕಿತನಾಮದಿಂದ ಹಾಡುಗಳನ್ನು ರಚಿಸಿರುವಳು.

ಗಿರಿಯಮ್ಮನ ಅತ್ತೆಮನೆ ಮಲೆಬೆನ್ನೂರು. ಗಿರಿಯಮ್ಮ ತನ್ನ ಗಂಡನ ಮನೆಯಲ್ಲಿ ಎಲ್ಲರಿಗೂ ಪ್ರೀತಿಪಾತ್ರಳಾಗಿದ್ದಳು. ಒಂದು ದಿನ ನೆರೆಮನೆಯ ಹೆಂಗಸರೊಡನೆ ಬಟ್ಟೆ ಒಗೆಯಲು ಹೆಳವನಕಟ್ಟೆಗೆ ಹೋದಳು. ದಾರಿಯುದ್ದಕ್ಕೂ ಆ ಹೆಂಗಸರು ಸಂಸಾರದ ವಿಷಯವನ್ನು ಚರ್ಚಿಸುತ್ತಾ ಹೊರಟರು. ಗಿರಿಯಮ್ಮ ದೇವರನ್ನು ಧ್ಯಾನಿಸುತ್ತಾ ಹೊರಟಳು. ಬಟ್ಟೆ ಒಗೆದನಂತರ ಹೆಂಗಸರೆಲ್ಲರೂ ರಂಗನಾಥನ ಗುಡಿಗೆ ಹೋದರು. ಗಿರಿಯಮ್ಮನೂ ದೇವರ ದರ್ಶನ ಮಾಡಿದಳು. ದೇವರಲ್ಲಿ ಅಚಲ ಶ್ರದ್ಧೆ ಇದ್ದು ದರಿಂದ ರಂಗನಾಥನನ್ನು ಕಂಡು ಬಹಳ ಆನಂದಪಟ್ಟಳು. ಆಕೆಗೆ ದೇವರನ್ನು ಬಿಟ್ಟು ಬರಲು ಮನಸ್ಸೇ ಬಾರದು. ಜೊತೆಯ ಹೆಂಗಸರೆಲ್ಲರೂ ಹೊರಡಲನುವಾಗುತ್ತಿದ್ದುದರಿಂದ ಗಿರಿಯಮ್ಮ ಬೇಗನೇ ಹೋಗಬೇಕಾಯಿತು. ಇನ್ನು ಮುಂದೆ ದೇವರದರ್ಶನ ವಿಲ್ಲದೆ ಒಂದು ತೊಟ್ಟು ನೀರನ್ನು ಬಾಯಿಗೆ ಬಿಡುವುದಿಲ್ಲ ಎಂದು ದೃಢನಿರ್ಧಾರ ಮಾಡಿಕೊಂಡಳು. ಅತ್ತಿಗೆ ನಾದಿನಿಯರ ನಿಂದನೆಗೆ ಗುರಿಯಾದಳು. ಮಾವ ಕೃಷ್ಣಯ್ಯನವರಿಗೆ ಗಿರಿಯಮ್ಮನ ಬಗ್ಗೆ ಅನುಮಾನ ಬಂದಿತು.

ಒಂದು ದಿನ ಗಿರಿಯಮ್ಮನನ್ನು ಪರೀಕ್ಷಿಸುವ ಸಲುವಾಗಿ ಗಿರಿಯಮ್ಮನ ಮಾವ ಗುಡಿಯ ಹತ್ತಿರ ಬಂದರು. ರಂಗನಾಥ ದೇವಾಲಯದ ಎದುರಿನಲ್ಲಿದ್ದ ಮರವನ್ನೇರಿ ಕುಳಿತುಕೊಂಡನು. ಗಿರಿಯಮ್ಮ ರಂಗನಾಥನ ಗುಡಿಯ ಹತ್ತಿರ ಬಂದಾಗ ಒಂದು ಕಲ್ಲನ್ನು ಎಡವಿ ಬಿದ್ದುಬಿಟ್ಟಳು. ಆಕೆಯ ಭಕ್ತಿಗೆ ಮೆಚ್ಚಿದ

ರಂಗನಾಥನು ನಾಲಗೆಯ ಮೇಲೆ ಬೀಜಾಕ್ಷರಗಳನ್ನೇ ಬರೆದನು. ಗಿರಿಯಮ್ಮನಿಗೆ ಜ್ಞಾನೋದಯವಾಯಿತು. ಗಿರಿಯಮ್ಮ ಭಗವಂತನನ್ನೇ ದೃಷ್ಟಿಸುತ್ತಾ ತನ್ನ ಕಂಠದಿಂದ

ಕಂಡೆನೀಗ ರಂಗನಾಥನ ಕಾರುಣ್ಯನಿಧಿಯ
ಭಕ್ತಳ ಬನ್ನ ಪರಾಕು ಭಾಗ್ಯದ ನಿಧಿಯ
ನಿನ್ನ ಮೊರೆಯ ಹೊಕ್ಕೆ ಕಾಯೋ ಎನ್ನ
ಹೆಳವನಕಟ್ಟೆ ರಂಗಯ್ಯ

ಎಂದು ಹಾಡಿದಳು. ಅಂದಿನಿಂದ ಗಿರಿಯಮ್ಮ ನಿರರ್ಗಳವಾಗಿ ಹಾಡುವುದನ್ನು ಕಲಿತಳು. ಗಿರಿಯಮ್ಮನ ಮಾವನಿಗೆ ತನ್ನ ತಪ್ಪಿನ ಅರಿವಾಗಿ ಗಿರಿಯಮ್ಮನಲ್ಲಿ ಕ್ಷಮಾಪಣೆ ಕೇಳಿದನು.

ಮತ್ತೊಂದು ಪ್ರಸಂಗದಲ್ಲಿ ಗಿರಿಯಮ್ಮನ ಮಾವ ಚಪ್ಪಲಿ ರಿಪೇರಿಗೋಸ್ಕರ ಮಾದಿಗರವನಿಗೆ ಕೊಟ್ಟು ಬಂದಿದ್ದನು. ಸ್ನಾನ ಸಂಧ್ಯಾವಂದನೆ ನಂತರ ದೇವರ ಪೂಜೆಗಾಗಿ ದೇವರ ಕೋಣೆ ಯಲ್ಲಿದ್ದನು. ಆದರೂ ಅವನ ಮನಸ್ಸು ಚಪ್ಪಲಿಯನ್ನು ಹೊಲೆದಿದ್ದಾನೆಯೆ ? ಯಾವಾಗ ತಂದುಕೊಡುವನು ? ಎಂದು ಯೋಚಿಸುತ್ತಿತ್ತು. ಆ ಸಮಯದಲ್ಲಿ ಚಪ್ಪಲಿಯನ್ನು ತಂದ ವ್ಯಕ್ತಿ "ಒಡೆಯರಿದ್ದಾರಮ್ಮ ?" ಎಂದು ಗಿರಿಯಮ್ಮನನ್ನೇ ಕೇಳಿದ. ಆಗ ಗಿರಿಯಮ್ಮ "ಮಾವನವರು ಹೊಲಗೇರಿಗೆ ಹೋಗಿದ್ದಾರೆ" ಎಂದು ಉತ್ತರ ಕೊಟ್ಟಳು.

ದೇವರ ಕೋಣೆಯಲ್ಲಿದ್ದ ಗಿರಿಯಮ್ಮನ ಮಾವನಿಗೆ ಆಕೆಯ ಮಾತುಗಳು ಕೇಳಿಸಿ, ಕೋಪಗೊಂಡು ಹೊರಬಂದು, "ನೀನು ನನ್ನನ್ನು ಅಪಹಾಸ್ಯಕ್ಕೆ ಗುರಿ ಮಾಡಿದೆ, ನಿನ್ನ ಹರಿಭಕ್ತಿಯನ್ನಷ್ಟು ನೋಡುವ. ನನ್ನ ಈ ಎರಡು ಕೈಗಳಲ್ಲಿ ಏನಿದೆ ಎಂಬುದನ್ನು ಹೇಳ ಬಲ್ಲೆಯಾ" ? ಎಂದು ಕೇಳಿದನು. ಗಿರಿಯಮ್ಮ ತಡಮಾಡದೆ

"ಮಾವನವರೆ, ಒಂದು ಕೈಯಲ್ಲಿ ತುಳಸೀ ಪತ್ರವಿದೆ. ಇನ್ನೊಂದರಲ್ಲಿ ಬಿಲ್ವಪತ್ರೆಯಿದೆ" ಎಂದು ಇದ್ದುದನ್ನು ಹೇಳಿಬಿಟ್ಟಳು. ಗಿರಿಯಮ್ಮನ ಮಾವನಿಗೆ ಸಂತೋಷವಾಯಿತು. "ನಿನ್ನಂಥ ಸೊಸೆಯನ್ನು ಪಡೆದ ನಮ್ಮ ವಂಶ ಪವಿತ್ರವಾಯಿತು" ಎಂದು ಹೊಗಳಿದನು. ಮುಂದೆ ಗಿರಿಯಮ್ಮನ ಪೂಜಾ ಕಾರ್ಯಗಳಿಗೆ ಸಹಕರಿಸಿದನು. ಆದರೆ ಅತ್ತೆಗೆ ಮಾತ್ರ ಗಿರಿಯಮ್ಮನ ದೈವಭಕ್ತಿ ಸಹನೆಯಾಗುತ್ತಿರಲಿಲ್ಲ. ಓರಗಿತ್ತಿಯರೆಲ್ಲರೂ ಒಂದಾಗಿ ಗಿರಿಯಮ್ಮನನ್ನು "ಇವಳಿಗೆ ನೃತ್ಯ ಸಂಗೀತ ಬೇಕೇ" ಎಂದು ಟೀಕಿಸುತ್ತಿದ್ದರು.

ಒಬ್ಬೊಬ್ಬ ಸೊಸೆಯರು ಒಂದೊಂದು ವಾರ ಅಡಿಗೆ ಮಾಡುವ ಪದ್ಧತಿ ಇತ್ತು. ಗಿರಿಯಮ್ಮ ಅಡಿಗೆ ಮಾಡುವ ಸರದಿ ಬರುವ ಹೊತ್ತಿಗೆ ಸೌದೆ ಎಲ್ಲಾ ಮುಗಿದಿತ್ತು. ಅತ್ತಿಗೆ ನಾದಿನಿಯರೆಲ್ಲಾ ಸೌದೆ ಮುಗಿದುದನ್ನು ಗಿರಿಯಮ್ಮನಿಗೆ ತಿಳಿಸಲೇ ಇಲ್ಲ. ಅಡಿಗೆ ಮಾಡಲು ಸೌದೆ ಇಲ್ಲವೆಂದು ಅತ್ತೆಗೆ ತಿಳಿಸಿದಾಗ ಆಕೆ ಕಾಲು ಹಚ್ಚಿ ಅಡಿಗೆ ಮಾಡು ಎಂದಳು. ಗಿರಿಯಮ್ಮ ಹಾಗೇ ಮಾಡಿದಳು. ಒಲೆ ಉರಿಯುತ್ತಿತ್ತು, ಕಾಲು ಏನೂ ಗಾಯವಾಗದೆ ಹಾಗೇ ಇತ್ತು. ಗಿರಿಯಮ್ಮನ ಮಾವ ಕೃಷ್ಣಯ್ಯ ಅದನ್ನು ಕಂಡು ತಬ್ಬಿಬ್ಬಾದನು. ಅವನಿಗೆ ಗಿರಿಯಮ್ಮನ ದೈವಭಕ್ತಿ ಚೆನ್ನಾಗಿ ಅರ್ಥವಾಗಿತ್ತು. ದಯಮಾಡಿ ಒಲೆಯೊಳಗಿನಿಂದ ನಿನ್ನ ಕಾಲನ್ನು ತೆಗೆ ಎಂದು ಬೇಡಿಕೊಂಡನು. ಆಗ ಗಿರಿಯಮ್ಮ ಕಾಲು ತೆಗೆದಳು. ಆಕೆಯ ಅತ್ತೆ ಅತ್ತಿಗೆ ನಾದಿನಿಯರಿಗೆಲ್ಲಾ ಆಶ್ಚರ್ಯವಾಯಿತು. ಗಿರಿಯಮ್ಮಳ ದೈವಭಕ್ತಿ ಅರ್ಥವಾಯಿತು. ಇತರರು ಗಿರಿಯಮ್ಮನನ್ನು ಕಂಡು 'ದೇವರ ಲೀಲೆ' ಎಂದು ಹೊಗಳಿದರು.

ಗಿರಿಯಮ್ಮ ರಂಗನಾಥನನ್ನು ಸ್ಮರಿಸುತ್ತಾ, ಹಾಡನ್ನು ಹೇಳುತ್ತಾ ಬೆಣ್ಣೆ ಕಡೆಯುತ್ತಿದ್ದಳು. ಆ ಸಮಯದಲ್ಲಿ ರಂಗನಾಥ,

ಕೃಷ್ಣನಾಗಿ ಇವಳ ಕಣ್ಣುಮುಂದೆ ಚಲಿಸುತ್ತಿರುವಂತೆ ಕಾಣುತ್ತಿದ್ದ. ಗಿರಿಯಮ್ಮನ ಮಾವನಿಗೆ ಗಿರಿಯಮ್ಮನ ಹಾಡುಗಳ ಜೊತೆಗೆ ಗೆಜ್ಜೆಯ ಶಬ್ದ ಕೇಳಿಸುತ್ತಿತ್ತು. ಗಿರಿಯಮ್ಮನೇ ಗೆಜ್ಜೆ ಕಟ್ಟಿಕೊಂಡು ನರ್ತನ ಮಾಡುತ್ತಿದ್ದಾಳೆ ಎಂದುಕೊಂಡು ಬಂದು ನೋಡಿದನು. ಗಿರಿಯಮ್ಮ ಬೆಣ್ಣೆ ಕಡೆಯುತ್ತಿದ್ದಾಳೆ. ಕಣ್ಣುಮುಚ್ಚಿಕೊಂಡು ಭಕ್ತಿ ಭಾವದಿಂದ ಹಾಡುತ್ತಿದ್ದಾಳೆ. ಗೆಜ್ಜೆಯ ಶಬ್ದ ಕೇಳಿಸುತ್ತಲೇ ಇತ್ತು. ಈ ವಿಚಾರ ಮನೆಯ ಹೆಂಗಸರಿಗೆ ಸರಿ ಬರುತ್ತಿರಲಿಲ್ಲ. ಆದ್ದರಿಂದ ಗಿರಿಯಮ್ಮನ ಮೇಲೆ ಮತ್ತೊಂದು ಆರೋಪ ಹೊರಿಸಿದರು.

"ಗಿರಿಯಮ್ಮ ಮಜ್ಜಿಗೆಯನ್ನೇನೋ ಕಡೆಯುತ್ತಾಳೆ. ಆದರೆ ಬೆಣ್ಣೆ ಎಲ್ಲಾ ಅವಳೇ ತಿಂದು ಮುಗಿಸುತ್ತಾಳೆ" ಎಂದು ದೂರಿದರು. ಒಂದು ದಿವಸ ಗಂಡಸರೆಲ್ಲಾ ಊಟಕ್ಕೆ ಕುಳಿತಿದ್ದರು. ಗಿರಿಯಮ್ಮ ಬೆಣ್ಣೆ ಕಡೆಯುತ್ತಿದ್ದಳು. ಗಂಡಸರು ಊಟಕ್ಕೆ ಬೆಣ್ಣೆ ಬಡಿಸಬೇಕೆಂದು ಕೇಳಿದರು. ಓರಗಿತ್ತಿಯರು ಬಂದು ಊಟಕ್ಕೆ ಬೆಣ್ಣೆ ಬೇಕೆಂದು ಗಿರಿಯಮ್ಮನನ್ನು ಕೇಳಿದರು. ಗಿರಿಯಮ್ಮ ಕೃಷ್ಣನ ಧ್ಯಾನ ಮಾಡುತ್ತಿದ್ದಳು. ಓರಗಿತ್ತಿಯರು ಬೆಣ್ಣೆ ಕೇಳಿದೊಡನೆ 'ಒಳಗಡೆ ಬೇಕಾದಷ್ಟು ಬೆಣ್ಣೆ ಇದೆ. ತೆಗೆದುಕೊಂಡು ಬಡಿಸಿರಿ' ಎಂದಳು. ಅವರಿಗೆಲ್ಲಾ ಆಶ್ಚರ್ಯ "ಅಡಿಗೆ ಮನೆಯಲ್ಲಿ ನಿಂಬೆಹಣ್ಣಿನ ಗಾತ್ರದಷ್ಟೂ ಬೆಣ್ಣೆ ಇಲ್ಲ, ಬೆಣ್ಣೆ ಇದೆ ಎಂದು ಹೇಳುತ್ತಾಳಲ್ಲ. ಗಿರಿಯಮ್ಮನನ್ನು ಬೈಯಲಿ" ಎಂದುಕೊಂಡು ಒಳಗೆ ಹೋಗಿ ನೋಡಿದರೆ, ಸಾಲು ಸಾಲಾಗಿ ಜೋಡಿಸಿದ ಮಡಕೆಗಳಲ್ಲಿ ಬೆಣ್ಣೆ ತುಂಬಿದೆ, ಮನೆಯವರೆಲ್ಲರೂ ದಿಗ್ಭ್ರಮೆಗೊಂಡರು. ಆಗ ಅವರಿಗೆಲ್ಲಾ ಗಿರಿಯಮ್ಮನ ಮಹಿಮೆ ತಿಳಿಯಿತು.

ಒಮ್ಮೆ ಹೆಳವನಕಟ್ಟೆ ರಂಗನಾಥನ ಉತ್ಸವದ ಸಮಯದಲ್ಲಿ ದೇವರನ್ನು ಒಡವೆಗಳಿಂದ ಅಲಂಕರಿಸಿದ್ದರು. ಕೈ ಬೆರಳುಗಳಿಗೆ

ರತ್ನದುಂಗುರವನ್ನಿಟ್ಟಿದ್ದರು. ಮಾರನೆ ದಿವಸ ಅರ್ಚಕರು ಬಂದು ನೋಡಿದಾಗ ಚಿನ್ನದ ಉಂಗುರ ಮಾಯವಾಗಿತ್ತು. ಅರ್ಚಕರಿಗೆ ಕಳುವಿನ ಆರೋಪ ತಮ್ಮ ಮೇಲೆ ಬರುವುದೆಂದು ಗಾಬರಿಯಾಯಿತು. ಅಷ್ಟರಲ್ಲಿ ಗಿರಿಯಮ್ಮ ದೇವರ ಗುಡಿಯ ಹತ್ತಿರ ಹೋದರು. ಅರ್ಚಕರು ನಡೆದ ವಿಚಾರವನ್ನು ತಿಳಿಸಿ, ಈ ಅಪಮಾನದಿಂದ ಕಾಪಾಡಬೇಕೆಂದು ಬೇಡಿಕೊಂಡರು. ಆಗ ಗಿರಿಯಮ್ಮ ಹೀಗೆ ಒಂದು ಕೀರ್ತನೆಯನ್ನು ಹಾಡಿದಳು.

ಹೊನ್ನ ತಾ ಗುಬ್ಬಿ ಹೊನ್ನ ತಾ
ನಮ್ಮ ಚಿನುಮಯ ಮೂರುತಿ
ಚೆಲುವ ರಂಗನ ಕೈಗೆ............
ಹೊನ್ನ ತಾ ಗುಬ್ಬಿ ಹೊನ್ನ ತಾ
ಚೆನ್ನ ಗೋಪಾಲನ ಚೆಲುವ ಕೃಷ್ಣನ ಕೈಗೆ
ಆಗಮವನು ತಂದು ಅಜಗಿತ್ತ ಕೈಗೆ
ಸಾಗರವನೊತ್ತಿಕ್ಕಿ ಸುಧೆಯಿತ್ತ ಕೈಗೆ
ತೂಗಿ ನಡೆವ ಸ್ಥೂಲಕಾಯನ ಕೈಗೆ
ನಾಗಶಯನ ನರಸಿಂಹನ ಕೈಗೆ
ಹೊನ್ನ ತಾ ಗುಬ್ಬಿ ಹೊನ್ನ ತಾ

ಕೀರ್ತನೆ ಹೇಳಿ ಮುಗಿಸುವಷ್ಟರಲ್ಲಿ ಗುಬ್ಬಿಯು ಸ್ವಾಮಿಯ ಉಂಗುರವನ್ನು ತಂದು ಗರ್ಭಗುಡಿಯಲ್ಲಿ ಹಾಕಿತು. ಅರ್ಚಕರಿಗೆ ಆಶ್ಚರ್ಯ ಹಾಗೂ ಸಂತೋಷವಾಯಿತು. ಗಿರಿಯಮ್ಮನನ್ನು ಕೊಂಡಾಡಿದರು. ಗಿರಿಯಮ್ಮನಿಗೆ ಗುಬ್ಬಿ ತೆಗೆದುಕೊಂಡು ಹೋಗಿದ್ದುದು ದಿವ್ಯದೃಷ್ಟಿಯಿಂದ ತಿಳಿಯಿತು. ಗುಬ್ಬಿಯು ಗಿರಿಯಮ್ಮನ ಮಾತಿಗೆ ಗೌರವ ಕೊಟ್ಟು ಚಿನ್ನದ ಉಂಗುರವನ್ನು ಗರ್ಭಗುಡಿಯಲ್ಲಿ ತಂದಿಟ್ಟಿತು.

ಒಂದು ಸಾರಿ ಮಂತ್ರಾಲಯದ ಸುಮತೀಂದ್ರ ಸ್ವಾಮಿಗಳು

ಮಲೆಬೆನ್ನೂರಿಗೆ ಬಂದಿದ್ದರು. ಆಗ ಗಿರಿಯಮ್ಮ ಯಾರೋ ದೊಡ್ಡವರು ಬರುವರೆಂದು ದೇವಸ್ಥಾನದ ಮುಂಭಾಗವಲ್ಲಿ ರಂಗೋಲೆಯಿಂದ ಶ್ರೀ ಕೃಷ್ಣನ ಚಿತ್ರ ಬರೆದಿದ್ದಳು. ಸ್ವಾಮಿಗಳು ದೇವಸ್ಥಾನ ಪ್ರವೇಶಿಸುತ್ತಿದ್ದಂತೆ ಶ್ರೀ ಕೃಷ್ಣನ ವಿಗ್ರಹ ಆಕರ್ಷಿಸಿತು. "ಚಿತ್ರಬಿಡಿಸಿದವರು ಯಾರು?" ಎಂದು ವಿಚಾರಿಸಿದಾಗ ಗಿರಿಯಮ್ಮನೆಂಬುದು ಸುಮತೀಂದ್ರ ಸ್ವಾಮಿಗಳಿಗೆ ತಿಳಿಯಿತು. ದೇವರಿಗೆ ಅರ್ಚನೆ ಮಾಡಿ ನಂತರ ತೀರ್ಥ ವಿತರಣೆ ಮಾಡುವ ಸಮಯದಲ್ಲಿ ಸಾವಿರಾರು ಭಕ್ತರು ಸೇರಿದ್ದರು. ಸ್ವಾಮಿಗಳು ಎಲ್ಲೋ ದೂರದಲ್ಲಿ ಕುಳಿತಿದ್ದ ಗಿರಿಯಮ್ಮನ ಹೆಸರನ್ನು ಕೂಗಿ ದರು. ಗಿರಿಯಮ್ಮ ಬಂದು ತೀರ್ಥ ಪಡೆಯುವಷ್ಟರಲ್ಲಿ ಜನರ ಗುಂಪಿನಿಂದ ಗುಜು ಗುಜು ಶಬ್ದ ಕೇಳಿಸಿತು. ವಿಷಯ ಏನೆಂದು ವಿಚಾರಿಸಿದಾಗ, ಬಂಜೆಯಾದ ಗಿರಿಯಮ್ಮ ಮೊದಲ ತೀರ್ಥಕ್ಕೆ ಅನರ್ಹಳು ಎಂದರು. ಆಗ " ಗಿರಿಯಮ್ಮ ಏನು ಮಾಡುವೆ ?" ಎಂದು ಸ್ವಾಮಿಗಳು ಆಕೆಯನ್ನು ಪ್ರಶ್ನಿಸಿದಾಗ ಗಿರಿಯಮ್ಮ ಅಂಜದೆ ನೆಟ್ಟಗೆ ಗರ್ಭಗುಡಿಯೊಳಕ್ಕೆ ಹೋಗಿ ದೇವರನ್ನು ಪ್ರಾರ್ಥಿಸಿಕೊಂಡು,

ರಾಮ ಶ್ರೀ ರಘುನಂದನ  
ಶರಣು ಸಾರ್ವ ಭೌಮ  
ಮನದ ಕೋಟಿ ಮೋಹನಾಂಗ  
ಮಾಧವ ಪುಣ್ಯ ಚರಿತ ಕರುಣಾಪಾಂಗ  
ಹೆಳವನಕಟ್ಟೆ ನಿಲಯ ವೆಂಕಟ ಶ್ರೀರಂಗ

ಎಂದು ಹಾಡಿದಳು. ಆಗ ರಂಗನಾಥನು ತನ್ನ ಭಕ್ತಳ ಮೊರೆ ಯನ್ನು ಕೇಳಿಸಿಕೊಂಡು ಬಾಲಕೃಷ್ಣನಾಗಿ ಅಂಬೆಗಾಲಿಡುತ್ತ ಬಂದು ಗಿರಿಯಮ್ಮನ ಮಡಿಲನ್ನು ಸೇರಿದನು. ಗಿರಿಯಮ್ಮನಿಗೆ ಎಲ್ಲಿಲ್ಲದ

ಸಂತೋಷ. ಮಗುವನ್ನು ಎತ್ತಿಕೊಂಡು ಗಿರಿಯಮ್ಮ ಹೊರ ಬಂದಾಗ ಎಲ್ಲರಿಗೂ ಆಶ್ಚರ್ಯವಾಯಿತು. ಗಿರಿಯಮ್ಮನಿಂದಾಗಿ ಎಲ್ಲರಿಗೂ ರಂಗನಾಥನ ದರ್ಶನವಾಯಿತು. ನಂತರ ಸುಮತೀಂದ್ರ ಸ್ವಾಮಿಗಳು ಮೊದಲ ತೀರ್ಥ ಕೊಟ್ಟು ಗೌರವಿಸಿದರು. ಗಿರಿಯಮ್ಮ ಮಗುವನ್ನು ಎತ್ತಿಕೊಂಡು ಗರ್ಭಗುಡಿಯೊಳಕ್ಕೆ ಬಿಟ್ಟಳು. ಎಲ್ಲರೂ ನೋಡುತ್ತಿದ್ದಂತೆ ಮಗು ರಂಗನಾಥನ ವಿಗ್ರಹದಲ್ಲಿ ಲೀನವಾಯಿತು.

ಗಿರಿಯಮ್ಮನ ಜೀವಿತ ಕಾಲದಲ್ಲಿ ನಡೆದ ಅತಿಮಾನುಷ ಘಟನೆಗಳು ಅನೇಕ. ಗಿರಿಯಮ್ಮನ ಭಕ್ತಿಯನ್ನು ಮಾವ ಮತ್ತು ಓರಗಿತ್ತಿಯರು ಅರಿತಿದ್ದರು. ಅತ್ತೆಗೆ ಮಾತ್ರ ಗಿರಿಯಮ್ಮನನ್ನು ಕಂಡರೆ ಆಗುತ್ತಿರಲಿಲ್ಲ.

ದೇವರಿಗೆ ದೀಪ ಹಚ್ಚುವುದಕ್ಕೆ ಗಿರಿಯಮ್ಮನಿಗೆ ಎಲ್ಲಿಯೂ ತುಪ್ಪ ದೊರೆಯುತ್ತಿರಲಿಲ್ಲ. ರಂಗನಾಥನಿಗೆ ತುಪ್ಪವಿಲ್ಲದೆ ದೀಪ ಹಚ್ಚುವುದು ಹೇಗೆ ? ಎಂಬ ಕೊರಗು ಗಿರಿಯಮ್ಮನನ್ನು ಕಾಡುತ್ತಿತ್ತು. ತನಗೆ ಊಟಕ್ಕೆ ಬಡಿಸಿದ ತುಪ್ಪವನ್ನು ಅತ್ತೆಗೆ ಕಾಣದ ಹಾಗೆ ಎತ್ತಿಟ್ಟು ತಂದು ರಂಗನಾಥನಿಗೆ ದೀಪ ಹಚ್ಚು ತ್ತಿದ್ದಳು. ಅನಿವಾರ್ಯವಾಗಿ ಹಸುವಿನ ತುಪ್ಪ ಎಲ್ಲೂ ದೊರೆಯ ದಿದ್ದಾಗ ರಂಗನಾಥನ ಮುಂದೆ ತನ್ನ ಕಷ್ಟವನ್ನು ಹೇಳಿಕೊಳ್ಳು ತ್ತಿದ್ದಳು. ದೀಪದಿಂದ ಉಂಟಾಗುತ್ತಿದ್ದ ಕಪ್ಪನ್ನು ಶೇಖರಿಸಿ ಕಾಡಿಗೆಯನ್ನು ತಯಾರುಮಾಡಿ ಇಟ್ಟುಕೊಳ್ಳುತ್ತಿದ್ದಳು. ಕಣ್ಣು ನೋವಿನ ಬೇನೆ ಇದ್ದವರಿಗೆ ಆ ಕಪ್ಪನ್ನು ಹಚ್ಚಿ ನೋವನ್ನು ಹೋಗಲಾಡಿಸುತ್ತಿದ್ದಳು.

ಪುಂಗನೂರಿನ ಅರಸನಾದ ಜಯರಾಜರಿಗೆ ಅಚ್ಯುತರಾಯ ನೆಂಬ ಮಗನಿದ್ದನು. ಈತನಿಗೆ ಇದ್ದಕ್ಕಿದ್ದಂತೆ ಎರಡು ಕಣ್ಣುಗಳೂ

ಕುರುಡಾದವು. ತಿರುಪತಿಯಲ್ಲಿ ಸೇವೆ ಮಾಡಿದ ಪುಂಗನೂರಿನ ರಾಜಕುಮಾರನಿಗೆ ತಿರುಪತಿಯ ವೆಂಕಟೇಶನು ಒಂದು ಕಣ್ಣನ್ನು ಕೊಟ್ಟು ಇನ್ನೊಂದನ್ನು ತನ್ನ ಭಕ್ತಳಾದ ಗಿರಿಯಮ್ಮ ಕೊಡುತ್ತಾಳೆಂದು ಹೇಳಿ ಕಳುಹಿಸಿದನು. ಆದರಂತೆ ಗಿರಿಯಂಮ್ಮನನ್ನು ಹುಡುಕಿಕೊಂಡು ಮಲೆಬೆನ್ನೂರಿಗೆ ಬಂದು ಆಕೆಯನ್ನು ಕಂಡು ಆವಳಿಂದ ಕಪ್ಪನ್ನು ಹಚ್ಚಿಸಿಕೊಂಡರು. ಕೂಡಲೇ ಕಣ್ಣಿನ ದೃಷ್ಟಿ ಬಂದಿತು. ಆಗ ರಾಜಮನೆತನದವರು ಗಿರಿಯಮ್ಮನನ್ನು ಸಾಕ್ಷಾತ್ ದೇವರೆಂದು ಪರಿಗಣಿಸಿ ಸನ್ಮಾನಿಸಿದರು. ಶ್ರೀ ರಂಗನಾಥನ ಗುಡಿಯನ್ನು ವಿಸ್ತಾರವಾಗಿ ಕಟ್ಟಿಸಿ ಸುತ್ತಲಿನ ಜಾಗವನ್ನು ದೇವಸ್ಥಾನಕ್ಕಾಗಿ ದತ್ತಿಕೊಟ್ಟರು ಎಂಬ ಪ್ರತೀತಿ ಇದೆ.

ಮತ್ತೊಂದು ಸಲ ಮಲೆಬೆನ್ನೂರಿನ ಸುತ್ತಮುತ್ತಲ ಪ್ರದೇಶದಲ್ಲಿ ಮಳೆಯಿಲ್ಲದೆ ಜನರು ಕಂಗಾಲಾಗಿದ್ದರು. ಬೆಳೆಗಳೆಲ್ಲಾ ಒಣಗಿಹೋಗಿದ್ದವು. ಕುಡಿಯಲು ನೀರಿಲ್ಲದೆ ಪ್ರಾಣಿಗಳು ಮತ್ತು ಮನುಷ್ಯರು ಬದುಕುವುದೇ ಕಷ್ಟವಾಗಿತ್ತು. ದೇವರಲ್ಲಿ ಪ್ರಾರ್ಥಿಸಿದರು ಮತ್ತು ಹರಕೆ ಹೊತ್ತರು. ಆದರೂ ಮಳೆ ಬರಲಿಲ್ಲ. ಜನರೆಲ್ಲಾ ದಿಕ್ಕುಕಾಣದೆ ಗಿರಿಯಮ್ಮನಲ್ಲಿಗೆ ಬಂದು ತಮ್ಮ ಗೋಳನ್ನು ತೋಡಿಕೊಂಡರು. ಆಗ ಗಿರಿಯಮ್ಮ ಭಕ್ತಿಯಿಂದ ದೇವರನ್ನು

ಮಳೆಯ ದಯಮಾಡೋ ರಂಗಾ ನಿಮ್ಮ
ಕರುಣ ತಪ್ಪಿದರೆ ಉಳಿಯದೀಲೋಕಾ
ಪಶುಜಾತಿ ಹುಲ್ಲೆ ಸಾರಂಗ ಮೃಗಗಳು ಬಹಳ
ಹಸಿದು ಬಾಯಾರಿ ಬತ್ತಿದ ಕೆರೆಗೆ ಬಂದು
ತೃಷೆಯಡಗದೆ ತಲ್ಲಣಿಸಿ ಮೂರ್ಛೆಗೊಂಡು
ದೆಸೆದೆಸೆಗೆ ಬಾಯ್ಬಿಡುವನಯ್ಯ ಹರಿಯೆ

ಎಂದು ಪ್ರಾರ್ಥಿಸಿದಳು. ಹಾಡು ಮುಗಿಯುತ್ತಿದ್ದಂತೆಯೇ ಧಾರಾ

ಕಾರವಾಗಿ ಮಳೆ ಸುರಿಯಿತು. ಊರಿನ ಜನರು ಗಿರಿಯಮ್ಮನ ಭಕ್ತಿಯನ್ನು ಕೊಂಡಾಡಿದರು. ಮಲೆಬೆನ್ನೂರಿನ ಸಮೀಪ ದಿಬ್ಬನ ಹಳ್ಳಿ ಎಂಬ ಒಂದು ಗ್ರಾಮವಿದೆ. ಅಲ್ಲಿ ಪವಾಡದವರು ಎಂಬು ದೊಂದು ಮನೆತನವಿದೆ. ಆ ಮನೆತನದವರು ಹೆಳವನಕಟ್ಟೆ ರಂಗನಾಥನ ದರ್ಶನಕ್ಕೆ ಬಂದಿದ್ದಾಗ ಅವರ ಗಂಡು ಮಗು ಚಿಟ್ಟನೆ ಚೀರಿ ಕೆಳಗೆ ಬಿದ್ದು ಸತ್ತುಹೋಯಿತು. ತಂದೆ ತಾಯಿಗಳು ದುಃಖ ದಲ್ಲಿ ಮುಳುಗಿಹೋಗಿದ್ದರು. ಬಹಳಷ್ಟು ಜನ ಸೇರಿದ್ದರು. ಗಿರಿಯಮ್ಮನಿಗೂ ಈ ವಿಚಾರ ತಿಳಿಯಿತು. ಆ ಮಗುವನ್ನು ದೇವರ ಎದುರಿನಲ್ಲಿ ಮಲಗಿಸಿ ಒಂದು ತೆರೆಯನ್ನು ಕಟ್ಟಿಸಿದರು. ಗಿರಿಯಮ್ಮ ರಂಗನಾಥನನ್ನು ಕುರಿತು ಹೀಗೆ ಹಾಡಿದಳು,

ಪದುಮನಾಭನೆ ನಿನ್ನ ಪಾದಕಿಂಕರ
ನನ್ನ ಕೈ ಬಿಡುವುದುಚಿತವೇ ರಂಗಾ

ಅಷ್ಟರಲ್ಲಿ ತೆರೆಯು ಸರಿಯಿತು. ಮಗು ಆಟ ಆಡುತ್ತಾ ಕುಳಿತಿರುವು ದನ್ನು ಎಲ್ಲರೂ ನೋಡಿ ಆಶ್ಚರ್ಯಪಟ್ಟರು. ಗಿರಿಯಮ್ಮನ ಇಂತಹ ಅನೇಕ ಪವಾಡಗಳು ಜನರನ್ನು ಅಚ್ಚರಿಗೊಳಿಸಿದ್ದುವು. ಗಿರಿಯಮ್ಮ ಎಂದರೆ ದೇವರ ಅಂಶವೆಂದು ಜನರು ಭಾವಿಸಿದ್ದರು.

ಒಂದು ಸಲ ಗಿರಿಯಮ್ಮನ ಮೈದುನ ಸಂಸಾರದ ಹಣ ವನ್ನು ಖರ್ಚು ಮಾಡಿಬಿಟ್ಟಿದ್ದ. ಆ ಹಣದಿಂದ ಬ್ರಾಹ್ಮಣ ಸಂತರ್ಪಣೆ ನಡೆಸಿದ್ದ. ಆದ್ದರಿಂದ ಆತನನ್ನು ಕಾನೂನು ಪ್ರಕಾರ ಸೆರೆ ಹಿಡಿದು ಬಂಧಿಸಿ ಕೈಗಳಿಗೆ ಬೇಡಿ ಹಾಕಿದರು. ಕೆಲವು ನಿಮಿಷ ಗಳಲ್ಲಿ ಬೇಡಿಗಳು ಕಳಚಿಬಿದ್ದವು. ಮೇಲಿನ ಅಧಿಕಾರಿಗಳಿಗೆ ದೂರು ನೀಡಿದರು. ಮೇಲಾಧಿಕಾರಿಗಳು ಬಂದು ತನಿಖೆ ನಡೆಸಿದಾಗ ಗಿರಿಯಮ್ಮನ ಮಹಿಮೆಯಿಂದ ಹೀಗಾಗುತ್ತದೆ ಎಂಬ ವಿಷಯ ತಿಳಿಯಿತು. ಗಿರಿಯಮ್ಮನನ್ನು ಭೇಟಿ ಮಾಡಿದರು. ತಮ್ಮ ಕಛೇರಿಗೆ

ಬರುವಂತೆ ತಿಳಿಸಿದರು. ಅವರ ವಾಹನದಲ್ಲಿ ಕೂರಿಸಿಕೊಂಡು ಹೊರಟರು. ದಾರಿಯಲ್ಲಿ ಕೃಷ್ಣವೇಣಿ ಪ್ರವಾಹ ಬಂದು ಅಡಚಣೆ ಉಂಟಾಯಿತು. ಗಿರಿಯಮ್ಮ ನದಿಗೆ ಪೂಜೆ ಮಾಡಿದ ನಂತರ ನದಿಯು ಗಿರಿಯಮ್ಮನಿಗೆ ದಾರಿಬಿಟ್ಟಿತು. ಅಧಿಕಾರಿಗಳೆಲ್ಲಾ ವಿಸ್ಮಿತರಾದರು. ಗಿರಿಯಮ್ಮನ ಭಕ್ತಿ ಹಾಗೂ ಪವಾಡಕ್ಕೆ ಮೆಚ್ಚಿ ಅವಳ ಮೈದುನನನ್ನು ಬಿಟ್ಟುಕೊಟ್ಟರು. ಗಿರಿಯಮ್ಮನ ಕೀರ್ತಿ ನಾಡಿನ ಮೂಲೆ ಮೂಲೆಗೂ ಹಬ್ಬಿತು.

ಗಿರಿಯಮ್ಮ ತನ್ನ ಕೊನೆಯ ದಿನಗಳಲ್ಲಿ ಮೈಲಾರ, ಕೊಕ್ಕನೂರು, ಗೋಕರ್ಣ, ಬಿಳ್ಳಿಗಿರಿ, ದಾಗಿನಕಟ್ಟೆ ಮುಂತಾದ ಸ್ಥಳಗಳ ಯಾತ್ರೆ ಮಾಡಿದಳು. ಯಾತ್ರೆ ಮಾಡುವ ಸಮಯದಲ್ಲಿ ಒಂದು ದಿವಸ ರಂಗನಾಥನು ಬಂದು "ನಿನ್ನ ಕಾರ್ಯ ಮುಗಿಯಿತು, ನೀನು ಇಲ್ಲಿಂದ ಕಮ್ಮಾರಗಟ್ಟೆ ಎಂಬಲ್ಲಿಗೆ ಹೋಗು, ಅಲ್ಲಿ ಹನುಮಂತದೇವರ ದರ್ಶನವಾಗುವುದು. ಆತನ ದರ್ಶನ ಮಾಡಿ ಕೊಂಡು ನದಿಯಲ್ಲಿ ದೇಹವಿಡು" ಎಂದು ಹೇಳಿದನೆಂದು ಪ್ರತೀತಿ ಇದೆ. ಮತ್ತೆ ಕೆಲವು ಕಡೆ ಯಾತ್ರೆ ಮಾಡುತ್ತಿದ್ದಾಗ "ನೀನು ಇಲ್ಲಿಂದ ಕುಂಬಳೂರು,ದಾಗಿನಕಟ್ಟೆ ಮಾರ್ಗವಾಗಿ ಕಮ್ಮಾರಗಟ್ಟೆಗೆ ಹೋಗು: ಅಲ್ಲಿ ನಿನಗೆ ಮಾರುತಿ ದರ್ಶನ ಕೊಡುವನು" ಎಂಬ ಅಶರೀರ ವಾಣಿ ಕೇಳಿಸಿತಂತೆ. ಒಟ್ಟಿನಲ್ಲಿ ಗಿರಿಯಮ್ಮ ಯಾತ್ರೆ ಮುಗಿಸಿ ಶ್ರಾವಣ ಶುದ್ಧ ಪಂಚಮಿ ದಿವಸ ಕಮ್ಮಾರಗಟ್ಟೆಗೆ ಬಂದಾಗ ಒಂದು ದೊಡ್ಡ ಕಪಿ ದರ್ಶನ ಕೊಟ್ಟಿತು.

ಗಿರಿಯಮ್ಮ "ರಂಗನಾಥ ಹೇಳಿದ ಹನುಮ ನೀನೇ ಎಂಬುದು ನನಗೆ ಹೇಗೆ ತಿಳಿಯಬೇಕು" ಎಂದಾಗ ಪಕ್ಕದಲ್ಲಿದ್ದ ಹುಣಸೇ ಮರವನ್ನು ಕಿತ್ತು ಬುಡ ಮೇಲಾಗಿ ನಿಲ್ಲಿಸಿಬಿಟ್ಟಿತು. ಆ ಕ್ಷಣ ರಂಗನಾಥ ಹೇಳಿದ 'ಮಾರುತಿ' ಇದೇ ಎಂದು ತಿಳಿದು

ನಮಸ್ಕರಿಸಿ ತುಂಗಭದ್ರೆಯ ಪೂರ್ಣ ಪ್ರವಾಹದಲ್ಲಿ ಐಕ್ಯಳಾದಳು. ಇಂದಿಗೂ ಬುಡ ಮೇಲಾದ ಹುಣಸೆ ಮರಕ್ಕೂ ಆ ಕಟ್ಟೆಗೂ ಜನರು ಗಿರಿಯಮ್ಮನ ಹೆಸರು ಹೇಳಿ ಪೂಜೆ ಮಾಡುವರು.

ಕಮ್ಮಾರಗಟ್ಟೆ ಹೊನ್ನಾಳಿಗೆ ಸಮೀಪದಲ್ಲಿ ತುಂಗಭದ್ರಾ ತೀರದಲ್ಲಿದೆ. ಆ ಸ್ಥಳದಲ್ಲಿ ನದಿಗೆ ಸೋಪಾನವನ್ನು ಮತ್ತು ಮಾರುತಿಗೆ ದೇವಸ್ಥಾನವನ್ನು ಗಿರಿಯಮ್ಮನೇ ಕಟ್ಟಿಸಿರುವಳು. ಈಗಲೂ ಗಿರಿಯಮ್ಮನ ಪುಣ್ಯತಿಥಿಯಾದ ಶ್ರಾವಣ ಶುದ್ಧ ಪಂಚಮಿಯ ದಿವಸ ಆಕೆ ಸ್ಥಾಪಿಸಿದ ಮಾರುತಿಯ ರಥೋತ್ಸವ ವಾಗುವುದು.

## ೨. ಕೃತಿಗಳು

ಗಿರಿಯಮ್ಮ 'ಹೆಳವನಕಟ್ಟೆ ರಂಗ' ಎಂಬ ಅಂಕಿತದಿಂದ ಅನೇಕ ಕೃತಿಗಳನ್ನು ರಚಿಸಿದ್ದಾಳೆ. ಸಣ್ಣ ಹಾಡುಗಳನ್ನಲ್ಲದೆ ಕಥೆಗಳನ್ನಾಧರಿಸಿ ಕೆಲವು ದೊಡ್ಡ ಹಾಡುಗಳನ್ನು ರಚಿಸಿದ್ದಾಳೆ. ಅವು :

೧. ಉದ್ಧಾಳಿಕನ ಕಥೆ
೨. ಶಂಕರಗಂಡನ ಹಾಡು
೩. ಸೀತಾಕಲ್ಯಾಣ
೪. ಚಂದ್ರಹಾಸನ ಕಥೆ
೫. ಬ್ರಹ್ಮಕೊರವಂಜಿ

**ಸಣ್ಣ ಹಾಡುಗಳು :**

೧. ಕೃಷ್ಣ ಕೊರವಂಜಿ
೨. ಲವಕುಶರ ಕಾಳಗ

### ೧. ಉದ್ಧಾಳಿಕನ ಕಥೆ

ಉದ್ಧಾಳಿಕ ಚಿಕ್ಕಮಗುವಾಗಿದ್ದಾಗಲೇ ತಂದೆ ತಾಯಿಯನ್ನು ಕಳೆದುಕೊಂಡಿದ್ದ ಅವನು ಬಾಲ್ಯದಿಂದಲೂ ವಿರಾಗಿಯಾಗಿದ್ದು ಕೊಂಡು ತಪಸ್ಸು ಮಾಡುವುದಕ್ಕಾಗಿ ಹೋಗುವನು. ಅರವತ್ತು ಸಾವಿರ ವರ್ಷಗಳು ತಪಸ್ಸಿನಲ್ಲಿಯೇ ಕಳೆಯುವುವು. ಅವನಿಗೆ ಸಂತಾನ ಇಲ್ಲದುದಕ್ಕಾಗಿ ಅವನ ಪಿತೃಗಳು ಯಮಲೋಕದಲ್ಲಿ ಯಾತನೆಯನ್ನನುಭವಿಸುತ್ತಿರುವರು ಎಂಬ ವಿಚಾರ ತಿಳಿಯುವುದು. ಈ ವಿಚಾರವನ್ನು ಬ್ರಹ್ಮನಿಂದ ಖಚಿತಪಡಿಸಿಕೊಳ್ಳುವನು. ಋಷಿ ಮದುವೆಯಾಗಿ ಮಗನನ್ನು ಪಡೆಯಬೇಕೆಂದಿರುವನು.

ಆದರೆ ಹುಡುಗಿಯನ್ನು ಕೊಡುವವರು ಯಾರು ? ಎಂದು ಬ್ರಹ್ಮನನ್ನು ಕೇಳುವನು.

> " ಬಿಡದೆ ಜರಗಿ ನೆನೆ ಪರೆಗಳು ಬಂದಾವು ಸಡಲಿದವು ದಂತ ಪಂಜ್ತ
> ಕೊಡುವವರಾರು ಕನ್ನಿಕೆಯನು ಮುನಿಪನು ಜಡಜ ಭವನ
> ಬೆಸಗೊಂಡ "

ಆಗ ಬ್ರಹ್ಮನು ಕೋಸಲದೇಶದ ಅಯೋಧ್ಯಾಪಟ್ಟಣವನ್ನಾಳುತ್ತಿದ್ದ ರಘುರಾಯನ ಮಗಳು "ಚಿಪ್ಪಿನೊಳ್ ಮುತ್ತು ಮೂಡುವ ತೆರನಂತೆ" ಇರುವಳು, ಆಕೆಯನ್ನು ವಿವಾಹವಾಗುವಂತೆ ಸೂಚಿಸುವನು, ಇದು ಯಾವುದೂ ತಿಳಿಯದೆ ಗೆಳತಿಯರೊಡನೆ ನೀರಾಟವಾಡಲು ಬಂದ ಚಂದ್ರಾವತಿ ಏಳುಗಾವುದ ದೂರದ ಮೇಲಿಂದ ಉದ್ದಾಳಿಕನು ತೇಲಿಬಿಟ್ಟಿದ್ದ ಕಮಲವೊಂದನ್ನು ಆಘ್ರಾಣಿಸಿ ಗರ್ಭಧರಿಸುತ್ತಾಳೆ. ಗರ್ಭಿಣಿಯಾದ ಅವಿವಾಹಿತ ಮಗಳನ್ನು ಹೆತ್ತವರು ಮಾನಕ್ಕಂಜಿ ಕಾಡಿಗೆ ಅಟ್ಟುತ್ತಾರೆ. ಮುನಿಯೊಬ್ಬ ಅವಳನ್ನು ಮನೆಗೆ ಕರೆದೊಯ್ದು ಆಶ್ರಯ ಕೊಡುತ್ತಾನೆ. ದಿನ ತುಂಬಿದನಂತರ ಮೂಗಿನಿಂದ ಗಂಡು ಮಗು ವೊಂದು ಹುಟ್ಟುವುದು. ಅಪವಾದಕ್ಕೆ ಅಂಜಿ ಚಂದ್ರಾವತಿಯು ಮಗುವನ್ನು ನೀರಿನಲ್ಲಿ ತೇಲಿಬಿಡುವಳು.

ಆ ಮಗುವು ಉದ್ಧಾಳಿಕನ ಕೈಗೆ ಸಿಕ್ಕಿ ಆತನ ಆಶ್ರಯದಲ್ಲಿ ಬೆಳೆಯುವುದು. ಮಗುವಿಗೆ ಏಳುವರ್ಷ ತುಂಬಿದನಂತರ ಚಂದ್ರಾವತಿಯು ಆಶ್ರಮಕ್ಕೆ ಬರುವಳು, ಮುನಿಗಳಿಂದ ಆಕೆಯ ವಿಚಾರ ತಿಳಿದು ಅವಳನ್ನು ವಿವಾಹವಾಗುವನು. ಉದ್ದಾಳಿಕನು ಪುನಃ ಯೌವನವನ್ನೂ ಪಡೆಯುವನು.

ಪಾತ್ರವಿಲ್ಲವೆ ಸದ್ಗತಿಯಿಲ್ಲವೆಂಬ ನಂಬಿಕೆಗೂ, ವಿಧಿಲಿಖಿತ

2

ವನ್ನಾರೂ ಮೀರಲಾರರು ಎಂಬ ನಂಬಿಕೆಗೂ ನಿದರ್ಶನವಾಗಿದೆ ಈ ಕಥೆ.

## ಶಂಕರಗಂಡನ ಹಾಡು

ಮನ್ಮಥನ ಗರ್ವಭಂಗ ಈ ಹಾಡಿನ ವಸ್ತು. ರತಿ ಶಿವನ ತಂಗಿ. ಶಿವ ತನ್ನ ತಂಗಿಗಾಗಿ ವರಾನ್ವೇಷಣೆ ಮಾಡಿ, ಮನ್ಮಥನೇ ತಕ್ಕ ವರನೆಂದು ತಿಳಿದು, ದೂತರನ್ನು ಕಳುಹಿಸಿ ಅವನನ್ನು ಕರೆಯಿಸು ವನು. ರತಿಯ ರೂಪಿಗೆ ಮೆಚ್ಚಿ ಮನ್ಮಥ ಅವಳನ್ನು ಮದುವೆ ಯಾದನು. ಒಮ್ಮೆ ತಂಗಿಯನ್ನು ಕರೆಯಲು ಬಂದ ಶಿವನಿಗೆ

" ಹೂವಿನ ಮಂಚ ಪಂಚಭಕ್ಷ್ಯ ಪರಮಾನ್ನವುದಾವಾಗ
ನಮ್ಮನೆಯಲ್ಲಿ
ಉಣ್ಣಲಾರಳು ಜೋಳದನ್ನವ ನಮ್ಮಾಕೆ ನಾವೀಗ ಕಳಿಸುವೋರಲ್ಲ"

ಎನ್ನುವನು. ಶಿವ ಅವನಿಗೆ ಬುದ್ಧಿ ಕಲಿಸಲು, ಇದು ಒಳ್ಳೆಯ ಅವಕಾಶವೆಂದು ಭಾವಿಸಿ ಅವನ ಸಕಲ ಸಂಪತ್ತನ್ನು ಕಳೆದು ನಿರ್ಗತಿಕ ನನ್ನಾಗಿ ಮಾಡುತ್ತಾನೆ. ದರಿದ್ರನಾದ ಮನ್ಮಥನಿಂದ ತನ್ನ ದನ ಗಳನ್ನು ಕಾಯಿಸುತ್ತಾನೆ. ಕೊನೆಗೆ ತಂಗಿ ರತಿಯು ಪರಿಪರಿಯಾಗಿ ಬೇಡುತ್ತಾಳೆ. ತಂಗಿಯ ಬೇಡಿಕೆಯಂತೆ ಐಶ್ವರ್ಯ, ಮಾರ್ಬಲ ಎಲ್ಲವೂ ಮನ್ಮಥನಿಗೆ ಪ್ರಾಪ್ತವಾಗುವುದು. ಈ ಕಥೆಯನ್ನು ಶ್ರಾವಣಮಾಸದಲ್ಲಿ ಅಷ್ಟಮಿಯ ದಿನ ಗೌರಿದಾರ ಕಟ್ಟಿಕೊಳ್ಳುವಾಗ ಹೇಳುವ ಸಂಪ್ರದಾಯ ಉತ್ತರ ಕರ್ನಾಟಕದ ಹೆಂಗಸರಲ್ಲಿದೆ.

'ಶಂಕರ ಗಂಡನ' ಹಾಡುಗಳಲ್ಲಿ ಶಂಕರಗಂಡ ಎಂಬ ಪದದ ಅರ್ಥ ಬಹುಪಾಲು ಜನರಿಗೆ ತಿಳಿಯುವುದಿಲ್ಲ. ಶಂಕರಗಂಡ ಎಂಬುದು ಒಂದು ಬಗೆಯ ಧಾನ್ಯ. ಅಂದರೆ ಜೋಳ. ಈ ಅರ್ಥ ಬಂದಿರುವುದು ಔಚಿತ್ಯಪೂರ್ಣವಾಗಿದೆ. ಈ ಜೋಳವನ್ನೇ ಕುರಿತು

'ಶಂಕರ ಗಂಡನ ಹಾಡುಗಳು ' ಎಂಬ ಶೀರ್ಷಿಕೆಯನ್ನು ಕೊಡಲಾಗಿದೆ. ಆದರೆ ಗಿರಿಯಮ್ಮನ ಕೃತಿಯಲ್ಲಿ ಪ್ರಾರಂಭದಿಂದ ಅಂತ್ಯದವರೆಗೆ ಎಲ್ಲೂ ಜೋಳದ ಪ್ರಸ್ತಾಪ ಬಂದಿಲ್ಲ ಎಂಬುದು ಗಮನಾರ್ಹ.

ಹರಿಹರನ ಒಂದು ರಗಳೆಯಲ್ಲಿ ಶಂಕರಗಂಡ ಎನ್ನುವುದನ್ನು ಜೋಳಕ್ಕೆ ಪರ್ಯಾಯವಾಗಿ ಬಳಸಿರುವುದನ್ನು ಇಲ್ಲಿ ನೆನೆಯಬಹುದು,

## ಚಂದ್ರಹಾಸನ ಕಥೆ

ಚಂದ್ರಹಾಸನ ಕಥೆ ಮಹಾಭಾರತದಲ್ಲಿ ಬರುವ ರೋಮಾಂಚಕಾರಿ ಕಥೆಗಳಲ್ಲೊಂದು. ಚಂದ್ರಹಾಸ ಎಂತೆಂತಹ ಕಷ್ಟಗಳನ್ನು ಎದುರಿಸಿದ, ಕಡೆಗೆ ಭಗವಂತನ ಕೃಪೆಯಿಂದ ಗಂಡಾಂತರಗಳಿಂದ ಹೇಗೆ ಪಾರಾದ ಎಂಬುದನ್ನು ಕವಯಿತ್ರಿ ಚಿತ್ರಿಸಿದ್ದಾರೆ. ಚಂದ್ರಹಾಸನ ಜನನದಿಂದ ಪ್ರಾರಂಭವಾಗಿ ಅವನ ವಿವಾಹ ಮತ್ತು ಅವನು ತನ್ನ ಮಾವ–ಭಾವನನ್ನು ಉಳಿಸಿಕೊಳ್ಳುವವರೆಗೆ ಪ್ರಸಂಗಗಳಿವೆ. ಚಂದ್ರಹಾಸ ರಾಜ್ಯಕ್ಕೆ ಅಧಿಪತಿಯಾಗಿ ಮುಂದು ವರೆಯುವನು. ಕಥೆ ಸುಖಾಂತವಾಗಿ ಮುಕ್ತಾಯವಾಗಿದೆ.

ಮೂಲದಲ್ಲಿ ಜೈಮಿನಿ ಮುನಿಗಳು ಹೇಳಿದ ಸಂಸ್ಕೃತ ಕಾವ್ಯವನ್ನು, ಎಂದರೆ ಜೈಮಿನಿ ಭಾರತವನ್ನು ಆದರಿಸಿ ದೇವಪುರದ ಲಕ್ಷ್ಮೀಶನು ಕನ್ನಡದಲ್ಲಿ ಹೇಳಿದ್ದಾನೆ. ಲಕ್ಷ್ಮೀಶನ ಜೈಮಿನಿ ಭಾರತದ ಚಂದ್ರಹಾಸೋಪಖ್ಯಾನವೇ ತನ್ನ ಚಂದ್ರಹಾಸನ ಕಥೆಗೆ ಮೂಲವೆಂದು ಗಿರಿಯಮ್ಮ ತನ್ನ ಕಾವ್ಯಾರಂಭದಲ್ಲಿ ಹೇಳಿಕೊಂಡಿದ್ದಾಳೆ.

ಸುರಪುರವಾಸ ಲಕ್ಷ್ಮಿಯಕಾಂತ ಭಕ್ತರ್ಗೆ
ಬರೆದಂಥ ಜೈಮಿನಿಯೊಳಗೆ
ಪರಮಭಕ್ತ ಚಂದ್ರಹಾಸನ ಕಥೆಯನು
ಚರಿತೆಯ ಮಾಡಿ ವರ್ಣಿಸುವೆ

ಚಂದ್ರಹಾಸನ ಕಥೆಯನ್ನು ನಾಲ್ಕು ಸಂಧಿಗಳಲ್ಲಿ ವಿಸ್ತಾರವಾಗಿ ನಿರೂಪಿಸಿದ್ದಾಳೆ.

ಚಂದ್ರಹಾಸನ ಕಥೆ ಕನ್ನಡಿಗರೆಲ್ಲರಿಗೂ ಪರಿಚಿತವಾದುದು. ಮಹಾ ಭಗವದ್ಭಕ್ತನಾದ ಚಂದ್ರಹಾಸನ ಕಥೆಯಲ್ಲಿ ಕೆಲವು ಬದಲಾವಣೆಗಳಾಗಿವೆ. ಲಕ್ಷ್ಮೀಶನ ಕೃತಿ ಷಟ್ಪದಿಯಲ್ಲಿದ್ದರೆ, ಹೆಳವನಕಟ್ಟೆ ಗಿರಿಯಮ್ಮನ ಕೃತಿ ಸಾಂಗತ್ಯದಲ್ಲಿ ರಚಿತವಾಗಿದೆ. ಕಥಾವಸ್ತುವಿನಲ್ಲಿ ಸಾಮ್ಯವಿದೆ ಎಂಬುದಕ್ಕೆ ಒಂದು ನಿದರ್ಶನ ವನ್ನು ಗಮನಿಸಬಹುದು.

"ದೇಶಾಧಿಪತಿಯು ಗರ್ಭದಿ ಬಂದು ನನಗೀಗ ಹಾಸುವ ವಸ್ತುಗಳಿಲ್ಲ
ಬೀಸಿ ತೂಗುವರೆ ತೊಟ್ಟಿಲು ಇಲ್ಲವೆನುತಲಿ ಬೇಸತ್ತು ಅಳಲುವಳೊಮ್ಮೆ"

ಚಂದ್ರಹಾಸ ಮೂಲಾ ನಕ್ಷತ್ರದಲ್ಲಿ ಹುಟ್ಟಿದುದರಿಂದ ತಂದೆ ತಾಯಿಂಗಳನ್ನು ಕಳೆದುಕೊಂಡು ಅನಾಥನಾಗುತ್ತಾನೆ. ಮುದುಕಿ ದಾಸಿಯೊಬ್ಬಳ ರಕ್ಷಣೆಯಲ್ಲಿ ಕೆಲವುಕಾಲ ಬೆಳೆಯುತ್ತಾನೆ. ದೇಶಾಧಿಪತಿಯು ಬಸಿರಲ್ಲಿ ಬಂದರೂ ಉಣ್ಣಲು ಅನ್ನವಿಲ್ಲದೆ, ಉಡಲು ಬಟ್ಟೆಯಿಲ್ಲದೆ ಬವಣೆಪಡುವುದನ್ನು ಕಂಡು ದಾಸಿ ಸಂಕಟಪಟ್ಟು ಕಣ್ಣೀರು ಸುರಿಸುತ್ತಾಳೆ. ಕಡೆಗೆ ಸಾಲಿಗ್ರಾಮದ ಪ್ರಭಾವದಿಂದ ಬಂದ ಕಷ್ಟ ಪರಿಹಾರವಾಗುತ್ತದೆ.

ದುಷ್ಟಬುದ್ಧಿ ಬರೆದ ಪತ್ರವನ್ನು ಚಂದ್ರಹಾಸನೇ ಕೊಂಡೊಯ್ಯಬೇಕಾಯಿತು. ಆದರಲ್ಲಿ ಮೃತ್ಯುಛಾಯೆಯು ಅಂತ ವಿದ್ದರೂ ಕೃಷ್ಣ ಭಕ್ತನಿಗೆ ಶುಭಚಿಹ್ನೆಗಳೇ ಕಂಡುಬರುವುವು.

"ಸಂದೇಹವಿಲ್ಲದೆ ವಿಷವ ಕೊಡುವುದು, ಮುಂದಕೆ ಲೇಸುಂಟು ನಮಗೆ" ಎಂಬ ವಾಕ್ಯದಲ್ಲಿ 'ವ' ಕಾರವನ್ನು ತೆಗೆದು 'ಯ'ಕಾರವನ್ನು ಮಾಡಿದ್ದಳು, ದುಷ್ಟಬುದ್ಧಿಯ ಮಗಳು. ಅದರಂತೆ ಚಂದ್ರಹಾಸ ಆತನ ಅಳಿಯನಾದನು. ಕಡೆಗೆ ದುಷ್ಟ ಬುದ್ಧಿಯ ಸಂಚಿನಿಂದ ಅವನ ಮಗನೇ ಬಲಿಯಾಗುತ್ತಾನೆ. ಅದನ್ನು ಕಂಡು ಮಂತ್ರಿಯೂ ಸಾಯುವನು. ಚಂದ್ರಹಾಸನು ಕಾಳಿಯನ್ನೊಲಿಸಿಕೊಂಡು ಮಾವನನ್ನೂ-ಭಾವನನ್ನೂ ಉಳಿಸಿ ಕೊಂಡು ಕುಂತಲ ದೇಶಕ್ಕೆ ದೊರೆಯಾಗಿ ಇಬ್ಬರು ಹೆಂಡಿರಿಂದ ಇಬ್ಬರು ಪುತ್ರರನ್ನು ಪಡೆದು ನೂರ್ಕಾಲ ಸುಖವಾಗಿ ಬಾಳುವನು.

ಈ ಬಗೆಯ ಆಶಯವುಳ್ಳ ಕಥೆಗಳು ಜಾಗತಿಕ ಸಾಹಿತ್ಯ ದಲ್ಲಿ ಹಲವು ಕಂಡುಬರುತ್ತದೆ. ಉದಾಹರಣೆಗೆ: ಬೌದ್ಧ ಮತ್ತು ಜೈನಸಾಹಿತ್ಯಗಳಲ್ಲಿ ಯಹೂದ್ಯರ ಕಥೆಗಳಲ್ಲಿ ಚಂದ್ರಹಾಸೋಪಾಖ್ಯಾನದ ಪ್ರತಿಬಿಂಬಗಳಂತೆ ಇರುವ ಕಥೆಗಳು ಸಿಕ್ಕಿವೆ. ಆದರೆ ಈ ಕಥೆ ಎಲ್ಲಿ ಮೊದಲು ಬಳಕೆಗೆ ಬಂದಿತು, ಹೇಗೆ ಹರಡಿತು ಎಂಬ ಪ್ರಶ್ನೆಗೆ ಉತ್ತರ ಹೇಳುವುದು ಕಷ್ಟ.

'ಜೆಸ್ಟೋರೋಮನೋರಂ' ಎಂಬ ಜರ್ಮನಿಯ ಪುರಾಣ ಕಾವ್ಯವೊಂದರಲ್ಲಿ ಚಂದ್ರಹಾಸನ ಕಥೆಯನ್ನು ಹೋಲುವ ಒಂದು ಉಪಾಖ್ಯಾನವಿದೆ. ಕಾನ್ರಾಡ್ ಚಕ್ರವರ್ತಿಯ ಕಾಲದಲ್ಲಿ ಲಿಯೋಪಾಲ್ಡ್ ಎಂಬ ಶ್ರೀಮಂತನೊಬ್ಬನು ಯಾವುದೋ ಕಾರಣ ದಿಂದ ರಾಜಸನ್ನಿಧಿಯನ್ನು ತ್ಯಜಿಸಿ, ಪತ್ನಿಸಮೇತನಾಗಿ ಓಡಿಹೋಗಿ ಕಾಡಿನಲ್ಲಿ ಬಚ್ಚಿಟ್ಟುಕೊಂಡನು. ಒಮ್ಮೆ ಚಕ್ರವರ್ತಿಯು ಬೇಟೆಗೆ ಹೋದವನು ಕಾಡಿನಲ್ಲಿ ದಾರಿತಪ್ಪಿದನು. ಅವನಿಗೆ ಅಶರೀರವಾಣಿ ಯಾಯಿತು. "ಈಗ ಹುಟ್ಟಿರುವ ಮಗು ನಿನ್ನ ಅಳಿಯನಾಗುವನು"

ಎಂದು. ಚಕ್ರವರ್ತಿಯು ಸರದಾರನನ್ನು ಕಳುಹಿಸಿ ಕಾಡಿನಲ್ಲಿರುವ ಮಗುವನ್ನು ಕತ್ತರಿಸುವಂತೆ ಆಜ್ಞಾಪಿಸಿದನು. ಸರದಾರನಿಗೆ ಮುದ್ದಾದ ಮಗುವನ್ನು ಕೊಲ್ಲಲು ಮನಸ್ಸು ಬಾರದೆ ಅದನ್ನು ಅವನು ಸುರಕ್ಷಿತವಾದ ಜಾಗದಲ್ಲಿಟ್ಟು ಒಂದು ಮೊಲವನ್ನು ಕೊಂದು, ಅದರ ರಕ್ತವನ್ನು ತಂದು ಚಕ್ರವರ್ತಿಗೆ ತೋರಿಸಿದನು. ಮುಂದೆ ಆ ಮಾಂಡಲಿಕನು ಮಗುವನ್ನು ಸಾಕಿ 'ಹೆನ್ರಿ' ಎಂದು ಹೆಸರಿಟ್ಟನು.

ಕೆಲವು ಕಾಲದನಂತರ ಚಕ್ರವರ್ತಿಯು ಹೆನ್ರಿಯನ್ನು ಗುರುತಿಸಿ ಅವನ ಕೈಯಲ್ಲಿ ತನ್ನ ರಾಣಿಗೆ ಒಂದು ಪತ್ರ ಕಳುಹಿಸಿದನು. "ಈ ಕಾಗದ ಕಂಡೊಡನೆಯೆ ಇದನ್ನು ತರುವ ಯುವಕನನ್ನು ಕೊಲ್ಲಿಸತಕ್ಕದ್ದು. ಇಲ್ಲವಾದರೆ ಮರಣದಂಡನೆಯಾದೀತು" ಎಂಬ ಬರಹವಿದ್ದಿತು. ಪಾದ್ರಿಯೊಬ್ಬನ ಕೈಚಳಕದಿಂದ ಅದು "ಇವನಿಗೆ ನಮ್ಮ ಮಗಳನ್ನು ಕೊಟ್ಟು ಮದುವೆ ಮಾಡು" ಎಂಬ ಬರಹವಾಯಿತು. ಅದರಂತೆ ಹೆನ್ರಿ ಚಕ್ರವರ್ತಿಯ ಅಳಿಯನಾದನು. ಚಕ್ರವರ್ತಿಯು ಕಡೆಗೆ "ಎಲ್ಲವೂ ದೈವೇಚ್ಛೆ" ಎಂದುಕೊಂಡು ಸುಮ್ಮನಾದನು.

ಚಂದ್ರಹಾಸನ ಕಥೆಯಲ್ಲೂ ಹೆನ್ರಿಯ ಕಥೆಯಲ್ಲೂ ತಂತ್ರ ಒಂದೇ ಆಗಿದೆ.

ಮ್ಯಾಸಿಡೋನಿಯಾದ 'ನೈದಿಸ್' ಎಂಬ ಕಥೆಯಲ್ಲಿ ಮಾವನು, ವಿವಾಹದನಂತರ ಅಳಿಯನನ್ನು ಕುರಿಯರೊಪ್ಪದ ಬಳಿಗೆ ಕಳುಹಿಸೆಂದು ಹೆಂಡತಿಗೆ ಕಾಗದ ಕಳುಹಿಸಿದ್ದನು. ಅವಳು ಅಳಿಯ–ಮಗಳು ನಿದ್ರಿಸುತ್ತಿರುವುದನ್ನು ಕಂಡು ಎಬ್ಬಿಸಲು ಮನಸ್ಸಿಲ್ಲದೆ ಮಗನ ಕೈಯಿಂದ ಕಾಗದ ಕಳುಹಿಸಿದಳು. ಮಗನೂ ಕುರಿಯ ಕೊಪ್ಪದಲ್ಲಿ ಚೂರು ಚೂರಾಗಿ ಕತ್ತರಿಸಿ ಬಿದ್ದಿದ್ದನು.

ಅಪ್ಪ ಓಡಿಹೋಗುವನು. ಆದರೆ ಕಾಲ ಮಿಂಚಿತ್ತು. ಅವನ ಪ್ರಾಣ ಕಳೆದುಹೋಗಿತ್ತು. ಹೀಗೆ ಭವಿಷ್ಯವಾಣಿ ನಿಜವಾಗಿ, ಅಳಿಯನು ಮಾವನ ಆಸ್ತಿಗೆ ಉತ್ತರಾಧಿಕಾರಿಯಾಗುವನು.

ಇದೇ ವಸ್ತುವನ್ನೊಳಗೊಂಡ ಗ್ರೀಕ್ ಕಥೆಯಲ್ಲಿಯೂ ದಕ್ಷಿಣ ಸ್ಲೊವಾಕಿಯಾದ ಕಥೆಯಲ್ಲಿಯೂ ಚಂದ್ರಹಾಸನ ಕಥೆಯ ವಸ್ತುವನ್ನು ಹೋಲುವಂತಹದ್ದೇ ವಸ್ತುವುಂಟು.

ಹೀಗೆ ಚಂದ್ರಹಾಸನ ಕಥೆಯು ಬೇರೆ ಬೇರೆ ಹೆಸರುಗಳಿಂದ ಜಗತ್ತಿನ ಸಾಹಿತ್ಯಗಳಲ್ಲಿ ಪ್ರಚಾರವಾಗಿದೆ. ಒಂದೆಡೆ ದೈವೇಚ್ಛೆಯು ಅನುಲ್ಲಂಘನೀಯವೆಂಬ ತತ್ತ್ವವನ್ನು ಅದು ಸಾರುತ್ತದೆ. ಇನ್ನೊಂದೆಡೆ ಅದು ಜೀವ ದಯೆಯ ಮಹಿಮೆಯನ್ನು ವರ್ಣಿಸುವ ಧಾರ್ಮಿಕ ಕಥೆ. ವಿಷ್ಣುಭಕ್ತಿಯ ಶ್ರೇಷ್ಠತೆ, ಸಾಲಿಗ್ರಾಮದ ಮಹಿಮೆ–ಮೊದಲಾದ ಎಲ್ಲ ವಿಷಯಗಳ ಪ್ರಚಾರಕ್ಕೂ ಈ ಕಥೆ ಸಾಧನವಾಗಿದೆ. ಯಹೂದ್ಯರಲ್ಲೂ ಕ್ರಿಶ್ಚಿಯನ್ನರ ಬೈಬಲ್‌ನಲ್ಲೂ ಇಂತಹ ಕಥೆಗಳಿವೆ.

## ಸೀತಾಕಲ್ಯಾಣ

ಕೃತಿಯ ಹೆಸರೇ ಸೂಚಿಸುವಂತೆ ರಾಮಸೀತೆಯರ ಕಲ್ಯಾಣ ಮಹೋತ್ಸವ ಇದರ ವಸ್ತುವಾಗಿದೆ.

ಜನಕರಾಜನ ಮಗಳು ಸೀತೆಗೆ ಅಯೋಧ್ಯಾಪುರದ ದಶರಥರಾಜನ ಮಗನಾದ ಶ್ರೀರಾಮನೊಡನೆ ವಿವಾಹ ಮಾಡಲು ನಿಶ್ಚಯವಾಗುತ್ತದೆ. ಜನಕನ ಮನೆಗೆ ರಾಮ ಮತ್ತಿತರರು ಎಣ್ಣೆ ಅರಿಶಿಣಕ್ಕಾಗಿ ಹೋಗುತ್ತಾರೆ. ವಿವಾಹದ ಸಂದರ್ಭದಲ್ಲಿ ನಡೆಯುವ ಉರುಟಣೆ, ಹಸೆಗೆ ಕರೆಯುವುದೇ ಮೊದಲಾದವುಗಳ

ದೀರ್ಘ ವರ್ಣನೆ ಹಾಗೂ ಹತ್ತವತಾರಗಳ ವರ್ಣನೆ ಈ ಕೃತಿಯಲ್ಲಿ ಮುಖ್ಯವಾಗಿ ಬಂದಿದೆ.

ರಾಮಚಂದ್ರನನ್ನು ಹಸೆಗೆ ಕರೆಯುವ ಸಂದರ್ಭಗಳನ್ನು ಕವಯಿತ್ರಿಯ ವಾಣಿಯಲ್ಲಿಯೇ ನೋಡೋಣ.

ಪೊಕ್ಕುಳೊಳಜನ ಪೆತ್ತವಕೇಳು ಅಕ್ರೂರಜನ ಪೆತ್ತವಕೇಳು
ಮುಕ್ಕಣ್ಣನ ರಿಪು ಬಲವ ಸಂಹರಿಸಿದ ಭಕ್ತ ವತ್ಸಲ ಹಸೆಗೇಳೆಂದರು
ದಶರಥ ರಾಜನಂದನ ಕೇಳು ಅಸುರ ಸಂಹಾರ ಕಾರಣ ಕೇಳು
ವಸುಧೆಗೊಡೆಯ ರಾಮ ಹಸೆಗೇಳೆನುತಲಿ ಋಷಿಗಳೆಲ್ಲರು
ಶೃತಿಗರೆದಾಗ

ರಾಮನು ಹಸೆಗೆ ಬಂದುನಿಂದಾಗ ಕಹಳೆಗಳು ಕೂಗಿದವು. ಸೀತೆಯು ರಾಮನಿಗೆ ಅರಿಶಿನ ಹಚ್ಚುವಳು. ಬಳಿಕ ರಾಮನ ಸರದಿ ಬರುವುದು.

ಸರುವವೇದ ತತ್ತ್ವದ ಸಾರೆ, ಧರೆಸುತೆ ಜನಕರಾಯನ ತನುಜೆ
ನಿಮ್ಮಯ ಮುಖ ಕಮಲವ ತಾರೆಂದು ಅರಿಶಿಣಗಳಸಿಗುರಿದ ಸತಿಗೆ

ಅರಿಶಿಣ ಹಚ್ಚಿದ ನಂತರ ಐದು ಜನ ಮುತ್ತೈದೆಯರು ಆರತಿ ಬೆಳಗುವರು "ಕ್ಷಿತಿಯೊಳು ರಾಮನ ಸತಿಯಾಗೀಜಗದೊಳು ಶ್ರುತಿವಂತಳಾಗೆಂದು" ಹರಸುವರು.

## ಬ್ರಹ್ಮ ಕೊರವಂಜಿ

ಕಂಸನ ಸೆರೆಯಲ್ಲಿದ್ದ ದೇವಕಿಗೆ ಬ್ರಹ್ಮನು ಕೊರವಂಜಿ ವೇಷ ಧರಿಸಿ ಬಂದು ಶಕುನ ಹೇಳುವುದೇ "ಬ್ರಹ್ಮಕೊರವಂಜಿಯ" ವಸ್ತುವಾಗಿದೆ.

ಕೃಷ್ಣ ತನ್ನ ತಂಗಿಯನ್ನು ವಸುದೇವನಿಗೆ ಕೊಟ್ಟು ಮದುವೆಮಾಡಿರುತ್ತಾನೆ. ವಿವಾಹದ ಸಮಯದಲ್ಲಿ ದೇವಕಿಯ

ಗರ್ಭದಿಂದ ಜನಿಸುವ ಮಗುವಿನಿಂದಲೇ ಕಂಸನ ಸಾವು ಸಂಭವಿಸುತ್ತದೆ ಎಂದು ಅಶರೀರವಾಣಿಯಾಗುತ್ತದೆ. ಈ ಮಾತನ್ನು ಕೇಳಿ ಕಂಸ ಭಯಂಭೀತನಾಗಿ ದೇವಕಿ ವಸುದೇವರನ್ನು ಸೆರೆಯಲ್ಲಿಡುತ್ತಾನೆ. ಅವರಿಗೆ ಹುಟ್ಟಿದ ಮಕ್ಕಳನ್ನು ಕೊಲ್ಲುತ್ತಾ ಹೋಗುತ್ತಾನೆ.

ಕಂಸಾಸುರನಿಟ್ಟ ಸೆರೆಮನೆಯಲ್ಲಿ ಕಷ್ಟಪಡುತ್ತ ದೇವಕಿ ನಿಮಿಷವನ್ನು ಯುಗದಂತೆ ಕಳೆಯುತ್ತಿರುತ್ತಾಳೆ. ಆ ಸಂದರ್ಭದಲ್ಲಿ ಅವಳಿಗೆ ಕೃಷ್ಣ ಮಗನಾಗಿ ಹುಟ್ಟುವುದನ್ನು ತಿಳಿಸಿ ಸಮಾಧಾನಪಡಿಸುವುದಾಗಿ ಬ್ರಹ್ಮ ಕೊರವಂಜಿ ವೇಷಧರಿಸಿ ಹೊರಡುತ್ತಾನೆ. ಅವನ ಕೊರವಂಜಿ ವೇಷವನ್ನು ಗಿರಿಯಮ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾಳೆ :

ಗುಂಜಿದಂಡೆಯು ತೋಳುಭಾಪುರೆ ಗಲ್ಲಕೊತ್ತಿದ ವೀಳ್ಯವು
ಮುಂಜಿಟೆಯುಸರ ಹವಳಸರವಾ ಕೊರಳಲಿ ಹೊಳೆಯಲು
ಮುತ್ತು ಮಾಣಿಕ ಹೊನ್ನಗೂಡೆಯು ಪಿಡಿದು
ಹೊನ್ನಗೂಡೆಯ ಉತ್ತಮ ಶಿಶುವಿಗೆ ಬೆನ್ನಲೆಕಟ್ಟಿ
ಚಿತ್ತದೊಳಗೆ ನರಹರಿಯು ಧ್ಯಾನಿಸುತ
ಸತ್ಯಲೋಕದಿಂದಿಳಿದಳೇ ಕೊರವಿ

"ಮೊರದ ತುಂಬ ಮುತ್ತು ತಾರೆಮಾನಿನಿರನ್ನಳೆ" ಎಂದು ಕೊರವಿಯಂತೆ ಬೇಡಿ ತರಿಸಿ ಮುತ್ತಿನ ಅಕ್ಷತೆಯಿಟ್ಟು ಗುಟ್ಟಾಗಿ ಈ ರೀತಿ ಹೇಳುವನು.

ಉರ್ವಿಯೊಳಗೆ ಧಿಟ್ಟನಮ್ಮಾ ಅಮ್ಮಯ್ಯನಿಮ್ಮ
ಗರ್ಭದೊಳಿಹನು ಕಾಣಮ್ಮ
ಕಂಟಕ ಕಂಸನ ಅಮ್ಮ ಇವ ಪುಟ್ಟಿ
ಗಂಟಲ ಮುರಿವ ಕಾಣಮ್ಮ

ಶ್ರಾವಣ ಬಹುಳಾಷ್ಟಮಿಯ ನಡುರಾತ್ರಿ ಕೃಷ್ಣ ಹುಟ್ಟುವನು. ಅವನನ್ನು ವಸುದೇವ ಗೋಕುಲಕ್ಕೆ ಒಯ್ಯುವುದು, ಗೋಕುಲದಲ್ಲಿ ಅವನು ಬೆಳೆಯುವುದು. ಹಾಗೂ ಅಲ್ಲಿಂದ ಬಿಲ್ಲಹಬ್ಬಕ್ಕೆ ಮಥುರೆಗೆ ಬಂದ ಕಂಸನನ್ನು ಕೊಲ್ಲುವವರೆಗೆ ಭಾಗವತದ ದಶಮಸ್ಕಂದ ಪೂರ್ವಾರ್ಧದಲ್ಲಿ ಬರುವ ಘಟನೆಗಳನ್ನೆಲ್ಲಾ ಗಿರಿಯಮ್ಮ ಹೇಳುತ್ತಾಳೆ.

## ಕೃಷ್ಣ ಕೊರವಂಜಿ

ಇದು ಗಿರಿಯಮ್ಮನಿಂದ ರಚಿತವಾದ ಪ್ರಥಮ ಕೃತಿ ಎಂದು ವಿದ್ವಾಂಸರು ತಿಳಿಸಿದ್ದಾರೆ.

ಶ್ರೀ ಕೃಷ್ಣನು ಕೊರವಂಜಿಯ ವೇಷ ಧರಿಸಿ ಕಣಿ ಹೇಳುವುದೇ ಈ ಹಾಡಿನ ಕಥಾವಸ್ತುವಾಗಿದೆ. 'ಕಾವ್ಯಪ್ರೇಮಿ'ಯವರು ಸಂಪಾದಿಸಿರುವ "ಹೆಳವನಕಟ್ಟೆ ಗಿರಿಯಮ್ಮನ ಹಾಡುಗಳು" ಎಂಬಲ್ಲಿ ಕೊಟ್ಟಿರುವ ಕಥಾಭಾಗದಲ್ಲಿ ಈ ರೀತಿ ಇದೆ. ರುಕ್ಮಿಣಿಗೆ ಅಣ್ಣನಾದ ರುಕ್ಮಿ ತನ್ನ ತಂಗಿಯನ್ನು ಜರಾಸಂಧನಿಗೆ ಕೊಡಲು ನಿಶ್ಚಯಿಸಿರುತ್ತಾನೆ. ಆದರೆ ರುಕ್ಮಿಣಿಗೆ ಅವನನ್ನು ಮದುವೆಯಾಗಲು ಇಷ್ಟವಿರಲಿಲ್ಲ. ಶ್ರೀಕೃಷ್ಣನಿಗೂ ರುಕ್ಮಿಣಿಯನ್ನು ವಿವಾಹವಾಗಬೇಕೆಂಬ ಬಯಕೆ ಇರುವುದು. ಆದ್ದರಿಂದ ಶ್ರೀಕೃಷ್ಣನು ಕೊರವಂಜಿಯ ರೂಪಧರಿಸಿ ಬಂದು ರುಕ್ಮಿಣಿಯ ಮನೆ ಮುಂದೆ ನಿಂತು

ಹೆಬ್ಬಾಗಿಲದೊಳು ಹುಬ್ಬುಗಳ ಕುಣಿಸುತ
ಅಬ್ಬರದಿಂದ ಸ್ವರಗೈದಾಳು
ಏಯವ್ವಾ ಏಯವ್ವಾ ಬಾರೆಂದು
ಸಾರುತ್ತಾ ನಡೆದಾಳ ಕೊರವಂಜಿ

ಕೃಷ್ಣನನ್ನು ಮದುವೆಯಾಗುವುದಾಗಿ ಧೈರ್ಯ ತುಂಬುತ್ತಾಳೆ ಕೊರವಂಜಿ. ಈ ಹಾಡಿನಲ್ಲಿ ಗಿರಿಯಮ್ಮ ಹೊಸತಂತ್ರವನ್ನು ಕಲ್ಪಿಸಿ ಕೃಷ್ಣಕೊರವಂಜಿಯ ಹಾಡಿಗೆ ಮೆರಗನ್ನು ಕೊಟ್ಟಿದ್ದಾಳೆ.

## ಲವಕುಶರ ಕಾಳಗ

ಇದೊಂದು ಹೊಸ ಅಂಶದಿಂದ ಕೂಡಿದ ಕೃತಿಯಾಗಿದೆ. ಗರ್ಭಿಣಿಯಾದ ಸೀತೆ ಅಗಸನ ನಿಂದೆಯಿಂದ ಕಾಡಿಗೆ ಬರುವ ಪ್ರಸಂಗವು ಇದುವರೆಗೆ ಪ್ರಕಟವಾದ ಕೃತಿಗಳಲ್ಲಿ ಕಂಡುಬಂದಿದೆ. ಆದರೆ ಗಿರಿಯಮ್ಮ ಆ ವಿಚಾರವನ್ನು ಕೈಬಿಟ್ಟಿದ್ದಾಳೆ. ಪಟದ ಸಂಧಿಯ ವರ್ಣನೆಯನ್ನು ಹೊಸದಾಗಿ ಸೇರಿಸಿರುವಳು.

ಗರ್ಭಿಣಿ ಸೀತೆಗೆ ಹಿಂದಿನ ಸ್ಮರಣೆಯಾಗಿ ಋಷಿಪತ್ನಿಯರೊಡನೆ ತಪೋವನದಲ್ಲಿ ಕೆಲವು ಕಾಲವಿದ್ದು ಕಾಲ ಕಳೆಯಬೇಕೆಂಬ ಬಯಕೆ ಮೂಡುತ್ತದೆ. ರಾಮಲಕ್ಷ್ಮಣರಿಗೆ ಈ ವಿಚಾರ ತಿಳಿದು ಅವಳ ಆಕಾಂಕ್ಷೆಯನ್ನು ಈಡೇರಿಸುವರು. ಕಾಲ ಮೀರಿದುದರ ಪ್ರಯುಕ್ತ ಶೂರ್ಪನಖಿ ಕೊರವಿಯ ವೇಷ ಧರಿಸಿ ಸೀತೆಯಲ್ಲಿಗೆ ಬರುವಳು.

'ಆವಕೊರವಿ ನೀನು, ಏನು ಕಾರಣ ಬಂದಿ ಈ ನಾಡ ಕೊರವಿ ನೀನಲ್ಲ' ಎಂದು ಸೀತೆ ಕೇಳಿದಳು. ಕೊರವಿ ತನ್ನ ಮಾತಿನಿಂದ ಸೀತೆಯನ್ನು ಮರುಳುಗೊಳಿಸಿ ರಾವಣನ ಚಿತ್ರ ಬರೆಯುವಂತೆ ಕೇಳುತ್ತಾಳೆ. ಸೀತೆ ಒಪ್ಪದಿದ್ದಾಗ ಕೊರವಿ ಮರಳು ತಂದು ಭಸ್ಮತೊಳೆದು ಸಿಂಪಡಿಸುವಳು. ಆಗ ಸೀತೆಯು ರಾವಣನ ಅಂಗುಷ್ಠ ಮಾತ್ರ ಗೊತ್ತು, ಚಿತ್ರ ಬರೆಯಲಾಗುವುದಿಲ್ಲ ಎಂದರೂ ಒತ್ತಾಯಿಸಿ ಚಿತ್ರವನ್ನು ಬರೆಸುವಳು. ಆ ಚಿತ್ರ ಅಮರವಾಗಿರುವಂತೆ ಸೀತೆಯಿಂದಲೇ ವರ ಕೊಡಿಸು

ವಳು. ಜೊತೆಗೆ 'ಕಿರಿಯ ಲಕ್ಷ್ಮಣದೇವ ಹೊಡೆದರೆ ಮಡಿ ಯೆಂದು ವರವ ಕೊಟ್ಟಳು ಶ್ರೀಪಟಕೆ'.

ಸೀತೆಯಿಂದ ವರವನ್ನು ಪಡೆದ ಅನಂತರ ಆ ಪಟ ಗಾಳಿಯಲ್ಲಿ ಹಾರಾಡುತ್ತಿರುತ್ತದೆ. ಸೀತೆಗೆ ದಿಗಿಲಾಗಿ ಆ ಪಟವನ್ನು ಹಾಸಿಗೆ ಯೊಳಗೆ ಬಚ್ಚಿಡುತ್ತಾಳೆ. ಅಷ್ಟರಲ್ಲಿ ರಾಮಬಂದು ಒಂದು ಮಂಚದ ಮೇಲೆ ಕುಳಿತುಕೊಳ್ಳುವನು. ತಕ್ಷಣ ಮಂಚ ಮುರಿದು ಬೀಳುವುದು. ರಾಮಲಕ್ಷ್ಮಣರಿಬ್ಬರಿಗೂ ಆಶ್ಚರ್ಯ ಹಾಗೂ ದುಃಖವಾಗುವುದು. ಲಕ್ಷ್ಮಣ ಮಂಚವನ್ನೆಲ್ಲಾ ಹುಡುಕಾಡು ವನು. ಆಗ ಹತ್ತು ತಲೆಯ ರಾವಣನ ಪಟ ಕುಣಿಯುತೊಡಗಿತು. ಆಗ ರಾಮ "ಏಸು ದಿವಸ ಘಾಸಿಯಾಗಿ ಬರೆದಿ ಇವನ ಏಸು ದಿವಸ ಭೋಗಿಸಿದೆ ಮೋಸಮಾಡಿದಿ ದೇವಿ ಎನಕೂಡ ಹೇಳದೆ ಘಾಸಿ ಮಾಡಿದಿ ಎನ್ನನ್ನೆಂದಾ" ಸೀತೆಯು ಅದರಲ್ಲಿ ತನ್ನ ತಪ್ಪಿಲ್ಲವೆಂದು ಹೇಳಿದರೂ ಶ್ರೀರಾಮನಿಗೆ ಆವಳ ಬಗ್ಗೆ ಕೋಪ ಕಡಿಮೆಯಾಗಲಿಲ್ಲ. ಸೀತೆಯನ್ನು ಈ ರೀತಿ ಆಕ್ಷೇಪಿಸುತ್ತಾನೆ:

ಭೂಮಿದೇವಿ ಮಗಳೆಂದು ನಾ ತಂದೆನು ನಾಡೊಳಗದ ಪತಿವ್ರತೆ ಯೆಂದು
ಪ್ರಾಣದೊಲ್ಲಭ ನೀನು ಗತಿಯೆಂದು ನಂಬಿದೆ ರಾವಣಗೆ ಮರುಳಾಗೋದರಿಯೆ !

ಸೀತೆ ನಡೆದ ವಿಚಾರವನ್ನೆಲ್ಲಾ ರಾಮನಿಗೆ ತಿಳಿಸುವಳು. ಆದರೂ ರಾಮನಿಗೆ ಆವಳ ಬಗ್ಗೆ ಕೋಪ ಆರಲಿಲ್ಲ. ಅವಳನ್ನು ಕಾಡಿನಲ್ಲಿ ಕೊಂದುಬರುವಂತೆ ಲಕ್ಷ್ಮಣನಿಗೆ ಆಜ್ಞಾಪಿಸುವನು. ದೇವತೆಗಳು ಅಡ್ಡ ಬಂದುದರಿಂದ ಸೀತೆಯನ್ನು ಕೊಲ್ಲದೆ ಅವಳ ಗುರುತನ್ನು ತೆಗೆದುಕೊಂಡು ಹೋಗುವನು. ಕಾಡಿನಲ್ಲಿ ಸೀತೆಗೆ ವಾಲ್ಮೀಕಿಯ ಆಶ್ರಯ ದೊರಕುವುದು. ಅವಳು ಲವ-ಕುಶರಿಗೆ ಜನ್ಮ

ಕೊಡುವಳು. ಮಕ್ಕಳು ಹುಟ್ಟಿ ಬೆಳೆದು ಬಾಲಕರಾಗುವರು. ಅಷ್ಟರಲ್ಲಿ ರಾಮನ ಅಶ್ವಮೇಧಯಾಗದ ಕುದುರೆ ಲವಕುಶರಿದ್ದ ಆಶ್ರಮಕ್ಕೆ ಬರುವುದು. ರಾಮ ಲವ-ಕುಶರೆಲ್ಲರೂ ಯುದ್ಧಕ್ಕೆ ಸಿದ್ಧರಾಗುವರು. ವಸಿಷ್ಠರು ಅಲ್ಲಿಗೆ ಬಂದು ಲವಕುಶರ ವೃತ್ತಾಂತ ತಿಳಿಸುವರು. ತಂದೆ ಮಕ್ಕಳ ಮಿಲನವಾಗುವುದು.

## ಕಾವ್ಯಸಮೀಕ್ಷೆ

ಉದ್ದಾಳಿಕನ ಕಥೆಯಲ್ಲಿ ಕಥಾವಸ್ತು ಮೆಚ್ಚುವಂತಹದ್ದಾಗಿದೆ. ಅವಿವಾಹಿತಳಾದ ಚಂದ್ರವತಿಯು ಗರ್ಭಿಣಿಯಾಗಿ ಮೂಗಿನಿಂದ ಮಗುವನ್ನು ಪಡೆಯುವಳು. ಉದ್ಧಾಳಿಕ ವಿಧಿಲಿಖಿತದಿಂದಲೇ ಚಂದ್ರಾವತಿಯನ್ನು ಮದುವೆ ಆದದ್ದು ಎಂಬುದಾಗಿ ವಿಧಿಲೀಲೆಯ ಮೇಲೆ ಕಥಾವಸ್ತುವನ್ನು ಹೆಣೆದಿದ್ದಾರೆ. ಗಿರಿಯಮ್ಮನೇ ಹೇಳಿ ಕೊಂಡಿರುವಂತೆ ಉದ್ದಾಳಿಕನ ಕಥೆಯು ತತ್ತ್ವಜ್ಞಾನದ ಕಥೆ ಯಾಗಿದೆ.

ವೇದಾಂತವೇದ್ಯ ತತ್ತ್ವಜ್ಞಾನ ಕಥೆಯನು ವೇದವೇದ್ಯನ
ಪಾದ ನೆನೆಸಿ
ಮೋದದಿ ಮಾಡಿದೆ ಕಾವ್ಯದೊಳು ಕುಂದಿರೆ
ಓದಿ ತಿದ್ದುವರು ಸಜ್ಜನರು

ಭಕ್ತಿಪ್ರಚುರವಾದ ಕಾವ್ಯವನ್ನು ರಚಿಸಿ ಗಿರಿಯಮ್ಮ ಹೆಣ್ಣುಮಕ್ಕಳ ಒಲುಮೆಗೆ ಪಾತ್ರಳಾಗಿದ್ದಾಳೆ. ದೈವಭಕ್ತಿ ಅವಳ ಎಲ್ಲ ಕೃತಿಗಳಿಗೂ ಹಿನ್ನೆಲೆಯಾಗಿದೆ.

ಆಗತಾನೆ ಹುಟ್ಟಿದ ಮಗುವು ನದಿಯಲ್ಲಿ ತೇಲಿಬರುವ ದೃಶ್ಯವನ್ನು ಗಿರಿಯಮ್ಮ ಉದ್ದಾಳಿಕನ ಕಥೆಯಲ್ಲಿ ಚಿತ್ರಿಸಿರುವ ಸಾಲುಗಳಲ್ಲಿನ ನೈಜತೆಯನ್ನು ಗಮನಿಸಿ ;

ಸಣ್ಣ ಬೆರಳು ತನ್ನ ಬಾಯೊಳಗಿರಿಸಿದೆ, ಕಣ್ಣಮುಚ್ಚುತ ತೆರೆಯುತಲಿ
ಹೊನ್ನ ಪುತ್ಥಳಿಯಂತೆ ಥಳಥಳಿಸುವ ಪುಟ್ಟ ಚಿಣ್ಣನ ತೊಟ್ಟಿಲೊಳು ಕಂಡ
ಭೋರುಗುಟ್ಟಿ ಬರುವ ನೀರ ಸೆಳವಿನಲಿ ಹರುಷದಿಂದಿರವೊ ಕಂದ
ನೀರಜ ಭವನ ಕಟ್ಟಳೆ ಮೀರಬಲ್ಲುದೆ ಸೇರಿತು ಮುನಿಯ ಒಳಗೆ

ಸಣ್ಣ ಹಸುಳೆಯ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ತೋರಿಸಿ, ಕಾವ್ಯದಲ್ಲಿ ಅಲ್ಲಲ್ಲಿ ಹಾಸ್ಯಚಟಾಕಿಯನ್ನು ಹಾರಿಸಿದ್ದಾಳೆ ಗಿರಿಯಮ್ಮ.

ಒಟ್ಟಿನಲ್ಲಿ ಹೆಳವನಕಟ್ಟೆ ಗಿರಿಯಮ್ಮನ ಕಾವ್ಯದಲ್ಲಿ ಅಲಂಕಾರಗಳು, ಗಾದೆಗಳು ಜನಪದ ವಾಕ್ಯಗಳ ಬಳಕೆ ಇತ್ಯಾದಿಗಳೆಲ್ಲಾ ಅಡಕವಾಗಿವೆ. ಗಿರಿಯಮ್ಮನ ಕಾವ್ಯ ಸರಳವೂ ಸುಂದರವೂ ಆಗಿದೆ. ಭಕ್ತಿರಸ ಪ್ರಧಾನವಾದುದರಿಂದ ಕಾವ್ಯವು ನಿರರ್ಗಳವಾಗಿ ಓದಿಸಿಕೊಂಡು ಹೋಗುತ್ತದೆ.

ಗಿರಿಯಮ್ಮನ ಜೀವನವೃತ್ತಾಂತವನ್ನು ಓದಿದವರಿಗೆ ಆಶ್ಚರ್ಯ ಹಾಗೂ ಕುತೂಹಲಗಳು ಒಮ್ಮೆಲೆ ಆಗುವುದು ಸಹಜ. ಕಾರಣ ಕೆಲವು ಘಟನೆಗಳು ಉತ್ಪ್ರೇಕ್ಷೆ ಎನಿಸಿದರೆ ತಪ್ಪಾಗಲಾರದು. ಗಿರಿಯಮ್ಮನ ಅಡುಗೆ ಸರದಿ ಬಂದಾಗ ಸೌದೆಗಳೆಲ್ಲಾ ಮುಗಿದಿದ್ದವು. ಅಡುಗೆಗೆ ಸೌದೆ ಮುಗಿದಿದೆ ಎಂದು ಅತ್ತೆಗೆ ತಿಳಿಸಿದಾಗ, ಆಕೆ ಕಾಲು ಹಚ್ಚಿ ಅಡುಗೆ ಮಾಡು ಎಂದು ಹೇಳುವಳು. ಅದರಂತೆ ಗಿರಿಯಮ್ಮ ಕಾಲು ಹಚ್ಚಿ ಅಡುಗೆ ಮಾಡುತ್ತಿರುವಳು. ಕಾಲು ಉರಿಯುತ್ತಿದ್ದರೂ ಗಿರಿಯಮ್ಮನಿಗೆ ಏನೂ ಆಗದಿರುವುದು ಗಿರಿಯಮ್ಮನ ಮಾವ ಬಂದು ಕಾಲನ್ನು ಒಲೆಯಿಂದ ಹೊರ ತೆಗೆಯುವನು. ಕಾಲು ಏನೂ ಆಗದೆ ಹಾಗೆ ಉಳಿಯುವುದು. ಇದನ್ನೆಲ್ಲಾ ಒಪ್ಪುವುದು ತುಂಬ ಕಷ್ಟ. ಆಕೆ ಎಲ್ಲರಂತೆ ಹಸಿವು ಬಾಯಾರಿಕೆಗಳಿಂದ ಬಳಲಿದವಳು. ಹಾಗಿದ್ದ ಮೇಲೆ ಸೌದೆ, ಉರಿಯುವಂತೆ ಕಾಲು ಉರಿಯುವುದು ಸಾಧ್ಯವೆ? ಕಾಲು ನರ, ರಕ್ತ, ಮಾಂಸಗಳಿಂದ

ಕೂಡಿರುವಂತದ್ದು, ಹಾಗಿದ್ದ ಮೇಲೆ ಏನೂ ಆಗದೆ ಹಾಗೇ ಇತ್ತು ಎಂಬುದು ಹೇಗೆ ಸಾಧ್ಯ? ಗಿರಿಯಮ್ಮನಿಗೆ ದೇವರಲ್ಲಿ ಭಕ್ತಿ ಇತ್ತು ಎಂಬುದು ಸತ್ಯ. ಆದರೆ ಆಕೆಯ ಕಾಲುಗಳೇ ಉರಿಯುತ್ತಿದ್ದವು ಎಂಬುದು ನಂಬಲರ್ಹವಲ್ಲದ ಮಾತು. ಅದನ್ನು ಸಾಂಕೇತಿಕವಾಗಿ ಗ್ರಹಿಸಬೇಕಷ್ಟೆ.

ಒಮ್ಮೆ ಗಿರಿಯಮ್ಮ ಅತ್ತೆಮನೆಯಲ್ಲಿ ಬೆಣ್ಣೆ ಕಡೆಯುತ್ತಿರುತ್ತಾಳೆ. ಅಡುಗೆ ಮನೆಯಲ್ಲಿ ಒಂದು ಚೂರು ಬೆಣ್ಣೆಯಿರುವುದಿಲ್ಲ. ಗಿರಿಯಮ್ಮನ ಓರಗಿತ್ತಿಯರು ಬಂದು ಬೆಣ್ಣೆಯನ್ನು ಕೇಳಿದಾಗ ಅಡುಗೆ ಮನೆಯಲ್ಲಿ ಬೇಕಾದಷ್ಟು ಇದೆ, ತೆಗೆದುಕೊಂಡು ಬಡಿಸಿರಿ ಎಂದು ಉತ್ತರಿಸುವಳು. ಗಿರಿಯಮ್ಮನ ಓರಗಿತ್ತಿಯರು ಅಡುಗೆ ಮನೆಯಲ್ಲಿ ನೋಡಿದಾಗ ಸಾಲು ಸಾಲಾಗಿ ಜೋಡಿಸಿದ ಮಡಕೆಗಳಲ್ಲಿ ಬೆಣ್ಣೆ ತುಂಬಿದೆ. ಮನೆಯವರೆಲ್ಲಾ ದಿಗ್ಭ್ರಮೆಗೊಂಡರು ಎಂಬ ವಿಚಾರ ಬರುವುದು. ಗಿರಿಯಮ್ಮ ಯಕ್ಷಿಣಿ ಮಾಡುವವಳಲ್ಲ. ಆದರೆ ದೈವಭಕ್ತಳು. ಅಂದ ಮಾತ್ರಕ್ಕೆ ಜನರನ್ನು ವಿಸ್ಮಯಗೊಳಿಸುವ ಘಟನೆಗಳನ್ನು ಮಾಡುವ ಬಗೆಯಾದರೂ ಹೇಗೆ ? ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಗಿರಿಯಮ್ಮ ಕೃಷ್ಣಭಕ್ತಳು ನಿಜ. ಆದರೆ ಆಕೆ ಹೇಳಿದ ಕೆಲಸವನ್ನು ಶ್ರೀಕೃಷ್ಣ ಮಾಡುವುದಾದರೂ ಹೇಗೆ ? ಭಕ್ತಿರಸಕ್ಕೂ ಯಕ್ಷಣಿ ಕೆಲಸಕ್ಕೂ ವ್ಯತ್ಯಾಸ ಕಂಡುಬರುವುದಿಲ್ಲವೆ ?

ಹೆಳವನಕಟ್ಟೆ ರಂಗನಾಥನ ಉತ್ಸವ ಸಮಯದಲ್ಲಿ ರತ್ನದ ಉಂಗುರ ಕಳುವಾಗಿರುತ್ತದೆ. ಆ ಸಮಯದಲ್ಲಿ ಗಿರಿಯಮ್ಮ

ಹೊನ್ನ ತಾ ಗುಬ್ಬಿ ಹೊನ್ನ ತಾ
ನಮ್ಮ ಚಿನುಮಯ ಮೂರುತಿ

.......... ............

ಎಂದು ಒಂದು ಕೀರ್ತನೆಯನ್ನು ಹಾಡಿದೊಡನೆ ಗುಬ್ಬಿಯು ರತ್ನದ ಉಂಗುರವನ್ನು ಗರ್ಭದ ಗುಡಿಯಲ್ಲಿ ತಂದುಹಾಕುವುದು. ಪಕ್ಷಿಗಳಿಗೂ ಗಿರಿಯಮ್ಮನ ಭಕ್ತಿರಸ ಅರಿವಾಗುವುದೇ ಎಂಬುದು ಸೋಜಿಗ.

ಬಂಜೆಗೆ ಮೊದಲ ತೀರ್ಥ ಕೊಡುವುದು ಅನುಚಿತವೆಂದು ಗಿರಿಯಮ್ಮನನ್ನು ನಿಂದಿಸಿದಾಗ ದೇವರಲ್ಲಿ ಮೊರೆಯಿಡುವಳು. ತತ್‌ಕ್ಷಣ ರಂಗನಾಥ ಭಕ್ತಳ ಮೊರೆಯನ್ನು ಕೇಳಿಸಿಕೊಂಡು ಬಾಲಕೃಷ್ಣನಾಗಿ ಬಂದು ಆಕೆಯ ಮಡಿಲನ್ನು ಸೇರುವನು. ಗಿರಿಯಮ್ಮನಿಗೆ ತೀರ್ಥಪ್ರಸಾದ ವಿನಿಯೋಗವಾದ ಬಳಿಕ ಬಾಲಕೃಷ್ಣನನ್ನು ಗುಡಿಯೊಳಕ್ಕೆ ಬಿಡುವಳು. ಎಲ್ಲರ ಎದುರಿನಲ್ಲಿ ರಂಗನಾಥ ಲೀನವಾಗುವನು. ಸಾಕ್ಷಾತ್ ಪರಮಾತ್ಮನಾದ ರಂಗನಾಥನು ಒಬ್ಬ ಮಹಿಳೆಯ ಕೂಗಿಗೆ ಓಗೊಡುವುದಾದರೆ, ದಿನ ಬೆಳಗಾದರೆ ಕಷ್ಟದ ಕರೆಯು ಕೇಳಿಸಿದಾಗಲೆಲ್ಲಾ ರಂಗನಾಥ ಪ್ರತ್ಯಕ್ಷನಾಗಲು ಸಾಧ್ಯವೆ?

ಇಂತಹ ಪವಾಡಗಳನ್ನು ನಾವು ನಂಬಬೇಕಿಲ್ಲ. ಆದರೆ ಅವುಗಳ ಹಿಂದಿರುವ ಸತ್ಯವನ್ನು ಒಪ್ಪಿದರೆ ಸಾಕು. ಗಿರಿಯಮ್ಮ ದೈವಭಕ್ತೆ; ಅವಳ ಕಾವ್ಯಗಳಲ್ಲಿ ಭಕ್ತಿಯ ಹೆಚ್ಚಳವಿದೆ. ಅವು ಮಹತ್ತ್ವದ ಕೃತಿಗಳಲ್ಲದಿರಬಹುದು; ಆದರೆ ಗಮನಾರ್ಹವಾಗಿವೆ. ಕವಯಿತ್ರಿಯಾಗಿ ಗಿರಿಯಮ್ಮನಿಗೆ ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟಸ್ಥಾನವಿದೆ.

ಕೆ. ಸಂ. ೩೪೫–ಎಂ.ಯು.ಪಿ.ಎಂ.—೧೦,೦೦೦ ಪ್ರತಿಗಳು–೧–೪–೯೩

. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—
ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯಿ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ
೫೮. ಭಾರತೀಯ ಮಹಿಳಾ ಪರಂಪರೆ—ಬಿ. ಪಿ. ಚಂದ್ರಾಬಾಯಿ
೫೯. ಬಂಧುವರ್ಮ—ಬಿ. ಎಸ್. ಸಣ್ಣಯ್ಯ
೬೦. ಶ್ರೀರಾಮಾಯಣದರ್ಶನಂ—ಒಂದು ಸಮೀಕ್ಷೆ—ಡಾ. ಸಿ. ಪಿ.
ಕೃಷ್ಣಕುಮಾರ್
೬೧. ದುರ್ಗಸಿಂಹ—ರಾಮೇಗೌಡ

೬೨. ಪಾಲ್ಕುರಿಕೆ ಸೋಮನಾಥ—ಡಾ. ಆರ್ವಿಯಸ್ ಸುಂದರಂ
೬೩. ಕನ್ನಡ ಸಾಹಿತ್ಯದ ಭಾಗವತ ಕವಿಗಳು—
ಬಿ. ಎಸ್. ವೇಣುಗೋಪಾಲ್
೬೪. ಕುಮಾರ ವಾಲ್ಮೀಕಿ—ಡಾ. ಹೊಸಬೆಟ್ಟು ಸೀತಾರಾಮ ಆಚಾರ್ಯ
೬೫. ಕವಿರಾಜ ಮಾರ್ಗ—ಸೀತಾರಾಮ ಜಾಗೀರ್‌ದಾರ್
೬೬. ಪಾರ್ಶ್ವ ಪಂಡಿತ—ಬಿ. ನಂ. ಚಂದ್ರಯ್ಯ
೬೭. ವೃತ್ತವಿಲಾಸ—ಡಾ. ಕೆ. ರಾಘವೇಂದ್ರರಾವ್
೬೮. ಅಗ್ಗಳದೇವ—ಎಚ್. ಎನ್. ಕೃಷ್ಣಾಜೋಯಿಸ್
೬೯. ಕನಕದಾಸ—ಮಳಲಿ ವಸಂತಕುಮಾರ್
೭೦. ಶ್ರೀಪಾದರಾಜರು—ಡಾ. ಟಿ. ಎನ್. ನಾಗರತ್ನ
೭೧. ಸಿದ್ಧರಾಮ—ಡಾ. ಎಂ. ರಾಮಕೃಷ್ಣ
೭೨. ರನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೭೩. ಕನ್ನಡ ಕವಿಗಳು ಕಂಡ ಕ್ರೀಡೆಗಳು—ಡಾ. ಕೆ. ಶ್ರೀಕಂಠಯ್ಯ
೭೪. ಅಪರಾಧ ಪರಿಚಯ—ಆನಂದಮೂರ್ತಿ ಮಲಾಕಿ